# ನನ್ನ ನಲ್ಲ

**ಮಧುರ ಚೆನ್ನ, ಹಲಸಂಗಿ**

ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

**NANNA NALLA :** Collection of poems by **Madhurachanna, Halasangi**; Published by **Manu Baligar**, Director, Department of Kannada and Culture, Kannada Bhavana, J.C.Road, Bengaluru - 560 002.



ಮುದ್ರಿತ ವರ್ಷ : ೨೦೧೧
ಪ್ರತಿಗಳು : ೧೦೦೦
ಪುಟಗಳು : xxiv + ೧೩೮
ಬೆಲೆ : ರೂ. ೪೫/–

ರಕ್ಷಾಪುಟ ವಿನ್ಯಾಸ : **ಕೆ. ಚಂದ್ರನಾಥ ಆಚಾರ್ಯ**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು

ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು ೫೬೦ ೦೦೧

ಸಿಎಂ/ಪಿಎಸ್/೨೬/೧೧

# ಶುಭ ಸಂದೇಶ

ವಿಶ್ವ ಕನ್ನಡ ಸಮ್ಮೇಳನದ ಸಂಭ್ರಮಾಚರಣೆಯ ಸಂದರ್ಭದಲ್ಲಿ ಕನ್ನಡ ನಾಡು ಏಕೀಕರಣಗೊಂಡು ೫೫ನೇ ವರ್ಷಕ್ಕೆ ಹೆಜ್ಜೆಯನ್ನಿಟ್ಟಿದೆ. ಈ ಸಂದರ್ಭವನ್ನು ರಚನಾತ್ಮಕವಾಗಿ ದಾಖಲಿಸಿ ಸ್ಮರಣೀಯಗೊಳಿಸಬೇಕೆಂಬುದು ಸರ್ಕಾರದ ಮಹದಾಶಯ. ಅದಕ್ಕಾಗಿ ಬೆಳಗಾವಿಯಲ್ಲಿ **"ವಿಶ್ವ ಕನ್ನಡ ಸಮ್ಮೇಳನ"** ವನ್ನು ಇದೇ ಮಾರ್ಚ್ ತಿಂಗಳಿನಲ್ಲಿ ಆಯೋಜಿಸಲಾಗಿದೆ. ಇದನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುವುದು ಕರ್ನಾಟಕ ಸರ್ಕಾರದ ಆಶಯವಾಗಿದೆ. ಇದರ ಅಂಗವಾಗಿ ನಾಡಿನ ವಿವಿಧ ಕ್ಷೇತ್ರಗಳಲ್ಲಾಗಿರುವ ಪ್ರಗತಿಯ ಆತ್ಮಾವಲೋಕನದ ಜೊತೆಗೆ ಕನ್ನಡ ಸಾಹಿತ್ಯದ ಸೃಜನಶೀಲ ಮತ್ತು ಸೃಜನೇತರ ಪ್ರಕಾರಗಳ ೧೦೦ ಕೃತಿಗಳನ್ನು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಪ್ರಕಟಿಸಲಾಗುತ್ತಿದೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಯಲ್ಲಿ ಸಾಹಿತ್ಯಾಸಕ್ತರಿಗೆ ಒದಗಿಸುವ ಹಂಬಲ ನಮ್ಮದು.

ಈ ಸಾಹಿತ್ಯ ಮಾಲಿಕೆಯಲ್ಲಿನ ಕೃತಿರತ್ನಗಳನ್ನು ಕನ್ನಡಿಗರು ಸಹೃದಯತೆಯಿಂದ ಸ್ವಾಗತಿಸುವ ಮೂಲಕ ಇವುಗಳ ಪ್ರಯೋಜನವನ್ನು ಪಡೆದುಕೊಂಡರೆ ಸರ್ಕಾರದ ಈ ಯೋಜನೆ ಸಾರ್ಥಕವಾಗುತ್ತದೆ ಎಂದು ಭಾವಿಸುತ್ತೇನೆ.

ದಿನಾಂಕ ೨೪.೦೧.೨೦೧೧

**(ಬಿ.ಎಸ್. ಯಡಿಯೂರಪ್ಪ)**

ಕರ್ನಾಟಕ ಸರ್ಕಾರ

**ಗೋವಿಂದ ಎಂ. ಕಾರಜೋಳ**
ಕನ್ನಡ ಮತ್ತು ಸಂಸ್ಕೃತಿ,
ಸಣ್ಣ ನೀರಾವರಿ ಹಾಗೂ ಜವಳಿ ಸಚಿವರು

ವಿಧಾನಸೌಧ
ಬೆಂಗಳೂರು – ೦೧

# ಚೆನ್ನುಡಿ

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ ಸುಮಾರು ೧೦೦ ಕನ್ನಡದ ಮೇರುಕೃತಿಗಳನ್ನು ಮರುಮುದ್ರಿಸಲು ಉದ್ದೇಶಿಸಿರುತ್ತದೆ.

ಈ ಯೋಜನೆಯಡಿ ಕನ್ನಡ ಸಾಹಿತ್ಯದ ಬೇರೆ ಬೇರೆ ಕಾಲಘಟ್ಟಗಳಲ್ಲಿ ರಚನೆಗೊಂಡ ಕಥೆ, ಕಾದಂಬರಿ, ವಿಚಾರ ಸಾಹಿತ್ಯ, ಪ್ರಬಂಧ, ವಿಮರ್ಶೆ, ನಾಟಕ, ಕವನ ಸಂಕಲನ– ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳ ಕೆಲವು ಪ್ರಾತಿನಿಧಿಕ ಕೃತಿಗಳನ್ನು ಪ್ರಕಟಿಸಲಾಗುತ್ತಿದೆ. ಈ ಪ್ರಾತಿನಿಧಿಕ ಕೃತಿಗಳನ್ನು ಸರ್ಕಾರದಿಂದ ರಚಿತವಾದ ಆಯ್ಕೆ ಸಮಿತಿಯು ಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಕೃತಿಗಳನ್ನು ಮುದ್ರಣಕ್ಕೆ ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಎಲ್ಲಾ ವಿದ್ವಾಂಸರಿಗೂ ನನ್ನ ಧನ್ಯವಾದಗಳು. ಈ ಮಹತ್ವದ ಕೃತಿಗಳನ್ನು ಸಹೃದಯ ಕನ್ನಡಿಗರಿಗೆ ಸುಲಭ ಬೆಲೆಯಲ್ಲಿ ತಲುಪಿಸಬೇಕೆಂಬುದು ನಮ್ಮ ಹೆಗ್ಗುರಿಯಾಗಿರುತ್ತದೆ. ಕನ್ನಡ ಸಾಹಿತ್ಯದ ಮೈಲಿಗಲ್ಲುಗಳಾಗಿರುವ ಈ ಪುಸ್ತಕಗಳು ಭಾವಿ ಪೀಳಿಗೆಯವರಿಗೆ ದಾರಿದೀಪಗಳಾಗಿವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಹಾಗೂ ವಿದ್ಯಾರ್ಥಿಗಳು ಪಡೆದರೆ ನಮ್ಮ ಶ್ರಮ ಸಾರ್ಥಕವೆಂದು ಭಾವಿಸುತ್ತೇನೆ.

ದಿನಾಂಕ ೧೮.೦೧.೨೦೧೧

**(ಗೋವಿಂದ ಎಂ. ಕಾರಜೋಳ)**

# ಎರಡು ನುಡಿ

ಕರ್ನಾಟಕ ಸರ್ಕಾರವು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿರುವ ಸಾಹಿತಿಗಳ ಮಹತ್ವದ ಕೃತಿಗಳನ್ನು ಓದುಗರಿಗೆ ಒದಗಿಸಬೇಕೆಂಬ ಸದಾಶಯ ಹೊಂದಿರುತ್ತದೆ. ಈ ಯೋಜನೆಯಡಿ ಸುಮಾರು ೧೦೦ ಕೃತಿಗಳನ್ನು ಪ್ರಕಟಿಸಲು ಉದ್ದೇಶಿಸಿದೆ.

ಈ ಕೃತಿಗಳನ್ನು ಆಯ್ಕೆಮಾಡಲು ಖ್ಯಾತ ವಿದ್ವಾಂಸರಾದ ಪ್ರೊ. ಎಲ್.ಎಸ್. ಶೇಷಗಿರಿರಾವ್‌ರವರ ಅಧ್ಯಕ್ಷತೆಯಲ್ಲಿ ನಾಡಿನ ಹೆಸರಾಂತ ಸಾಹಿತಿ / ವಿದ್ವಾಂಸರುಗಳನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸಿದೆ. ಈ ಆಯ್ಕೆ ಸಮಿತಿಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಗೆ ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಬಂದ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆ ಮಾಡಿರುತ್ತದೆ. ಆಯ್ಕೆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ಸರ್ಕಾರದ ಪರವಾಗಿ ವಂದನೆಗಳು ಸಲ್ಲುತ್ತವೆ. ಈ ಪುಸ್ತಕಗಳನ್ನು ಹೊರತರಲು ಅನುಮತಿ ನೀಡಿ ಸಹಕರಿಸಿದ ಎಲ್ಲಾ ಲೇಖಕರು ಹಾಗೂ ಹಕ್ಕುದಾರರುಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಕನ್ನಡದ ಮೇರುಕೃತಿ ಸಾಹಿತ್ಯ ಮಾಲಿಕೆಯನ್ನು ಓದುಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ದಿನಾಂಕ ೧೭.೦೧.೨೦೧೧

**(ರಮೇಶ್ ಬಿ.ಝಳಕಿ)**
ಸರ್ಕಾರದ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ

# ಅಧ್ಯಕ್ಷರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳನ್ನು ಪುನರ್‌ಮುದ್ರಣ ಮಾಡಲು ಒಂದು ಯೋಜನೆಯನ್ನು ಕೈಗೊಂಡಿತು. ಕೃತಿಗಳ ಆಯ್ಕೆಗಾಗಿ ಸರ್ಕಾರವು ಒಂದು ಸಮಿತಿಯನ್ನು ರಚಿಸಿತು. ಈ ಮಹತ್ವದ ಯೋಜನೆಯ ಸಮಿತಿಯ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುವ ಸುಯೋಗ ನನ್ನದಾಯಿತು.

ಈ ಯೋಜನೆಯ ಮಹತ್ವವನ್ನು ನಾನು ವಿವರಿಸುವ ಅಗತ್ಯವಿಲ್ಲ. ಕನ್ನಡದ ಶ್ರೇಷ್ಠ ಕೃತಿಗಳನ್ನು ಸುಲಭ ಬೆಲೆಗೆ ಕನ್ನಡಿಗರ ಕೈಗಳಲ್ಲಿರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವು ಯೋಜನೆಗಳನ್ನು ಕೈಗೊಂಡಿರುವುದಕ್ಕಾಗಿ ಸರ್ಕಾರವನ್ನೂ ಇಲಾಖೆಯನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಕನ್ನಡ ಸಂಸ್ಕೃತಿಗೆ ಈ ಯೋಜನೆಗಳು ಮಹತ್ವದ ಕೊಡುಗೆಯನ್ನು ನೀಡುತ್ತವೆ.

ಕನ್ನಡದ ಮೇರುಕೃತಿಗಳನ್ನು ಆರಿಸುವುದು ಸುಲಭದ ಕೆಲಸವಲ್ಲ. ಇಂತಹ ಆಯ್ಕೆಯಲ್ಲಿ ಬೇರೆ ಬೇರೆ ಅಭಿಪ್ರಾಯಗಳಿಗೆ ಸಾಧಾರವಾಗಿಯೇ ಅವಕಾಶವಿರುತ್ತದೆ. ಕನ್ನಡ ನಾಡಿನ ಶ್ರೇಷ್ಠ ಸಾಹಿತಿಗಳು ಈ ಸಮಿತಿಯ ಸದಸ್ಯರಾಗಿದ್ದದ್ದು ಸುದೈವದ ಸಂಗತಿ. ಕೃತಿಗಳನ್ನು ಚರ್ಚಿಸಿ ಮಹತ್ವದ ನಿರ್ಧಾರಕ್ಕೆ ಬಂದ ಸಮಿತಿಯು ಸಾಧ್ಯವಾದ ಕಾರ್ಯವನ್ನು ಸಾಧಿಸಿದೆ. ಇದಕ್ಕಾಗಿ ನಾನು ಸಮಿತಿಯ ಎಲ್ಲ ಸದಸ್ಯರಿಗೂ ಕೃತಜ್ಞನಾಗಿದ್ದೇನೆ.

ಈ ಕಾರ್ಯದ ನಿರ್ವಹಣೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಮನು ಬಳಿಗಾರ್ ಅವರು ನೆರವಾಗಿದ್ದಾರೆ. ಅವರ ಮತ್ತು ಅವರ ಸಿಬ್ಬಂದಿಯವರ ಅಮೂಲ್ಯ ಸಹಕಾರಕ್ಕೆ ನಾನು ಕೃತಜ್ಞ.

ಕನ್ನಡ ನಾಡಿನ ಮನೆಮನೆಗಳಲ್ಲಿ ಸಾಹಿತ್ಯದ ಮಂಗಳ ದೀಪದ ಬೆಳಕನ್ನು ಹರಡುವ ಈ ಯೋಜನೆಯ ಪೂರ್ಣಪ್ರಯೋಜನವನ್ನು ಕನ್ನಡಿಗರು ಪಡೆದುಕೊಳ್ಳಲಿ ಎಂದು ಹಾರೈಸುತ್ತೇನೆ.

ಸಿರಿಗನ್ನಡಂ ಗೆಲ್ಗೆ!

**ಎಲ್.ಎಸ್. ಶೇಷಗಿರಿ ರಾವ್**

ಅಧ್ಯಕ್ಷ

ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

ದಿನಾಂಕ ೧೬.೧೨.೨೦೧೦

# ಪ್ರಕಾಶಕರ ಮಾತು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ 'ವಿಶ್ವ ಕನ್ನಡ ಸಮ್ಮೇಳನ'ದ ಅಂಗವಾಗಿ ಸುಮಾರು ನೂರು ಪುಸ್ತಕಗಳನ್ನು ಪ್ರಕಟಿಸಲು ಉದ್ದೇಶಿಸಿರುತ್ತದೆ. ಈ ಯೋಜನೆಯಡಿ ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಈ ಮೂರೂ ಕಾಲಘಟ್ಟಗಳಲ್ಲಿ ರಚನೆಗೊಂಡ, ಕನ್ನಡದಲ್ಲಿ ಮಹತ್ವದ ಕೃತಿಗಳೆಂದು ಪರಿಗಣಿತವಾಗಿರುವ ಪುಸ್ತಕಗಳನ್ನು ಸರ್ಕಾರವು ನೇಮಿಸಿರುವ ಆಯ್ಕೆ ಸಮಿತಿಯು ಮರುಮುದ್ರಣಕ್ಕೆ ಆಯ್ಕೆ ಮಾಡಿರುತ್ತದೆ. ಈ ಸಾಹಿತ್ಯ ಮಾಲೆಯಲ್ಲಿ ಈಗಾಗಲೇ ಇಲಾಖೆಯು ಸಮಗ್ರ ಸಾಹಿತ್ಯ ಪ್ರಕಟಣೆಯಡಿ ಪ್ರಕಟಿಸಿರುವ ಲೇಖಕರ ಕೃತಿಗಳನ್ನು ಪರಿಗಣಿಸಿರುವುದಿಲ್ಲ.

ಕನ್ನಡದ ಮೇರುಕೃತಿಗಳ ಮರುಮುದ್ರಣಕ್ಕೆ ಪುಸ್ತಕಗಳನ್ನು ಆಯ್ಕೆ ಮಾಡಿದ ಆಯ್ಕೆ ಸಮಿತಿಯ ಅಧ್ಯಕ್ಷರಾದ ಪ್ರೊ. ಎಲ್.ಎಸ್. ಶೇಷಗಿರಿ ರಾವ್‌ರವರಿಗೆ ಹಾಗೂ ಸಮಿತಿಯ ಸದಸ್ಯರುಗಳಾದ ಡಾ. ಚಂದ್ರಶೇಖರ ಕಂಬಾರ, ಡಾ. ಹಂಪ ನಾಗರಾಜಯ್ಯ, ಡಾ. ಎಂ.ಎಂ.ಕಲಬುರ್ಗಿ, ಡಾ. ದೊಡ್ಡರಂಗೇಗೌಡ, ಡಾ. ಎಚ್.ಜೆ. ಲಕ್ಕಪ್ಪಗೌಡ, ಡಾ. ಅರವಿಂದ ಮಾಲಗತ್ತಿ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಡಾ. ಪಿ.ಎಸ್. ಶಂಕರ್, ಶ್ರೀಮತಿ ಸಾರಾ ಅಬೂಬಕರ್, ಡಾ. ಪ್ರಧಾನ್ ಗುರುದತ್ತ ಇವರುಗಳಿಗೆ ನನ್ನ ಕೃತಜ್ಞತೆಗಳು. ಈ ಯೋಜನೆಯಡಿ ಮರುಮುದ್ರಣಕ್ಕೆ ಆಯ್ಕೆಯಾಗಿರುವ ಪುಸ್ತಕಗಳ ಮುದ್ರಣಕ್ಕೆ ಅನುಮತಿ ನೀಡಿದ ಎಲ್ಲ ಲೇಖಕರಿಗೂ, ಹಕ್ಕುದಾರರಿಗೂ ಮತ್ತು ಕರಡಚ್ಚು ತಿದ್ದಿದವರಿಗೂ ನನ್ನ ವಂದನೆಗಳು.

ಸದರಿ ಪ್ರಕಟಣಾ ಯೋಜನೆಯ ಪುಸ್ತಕಗಳನ್ನು ಹೊರತರಲು ಸಹಕರಿಸಿದ ಶ್ರೀ ಎಚ್. ಶಂಕರಪ್ಪ, ಜಂಟಿ ನಿರ್ದೇಶಕರು, (ಸು.ಕ.), ಶ್ರೀಮತಿ ವೈ.ಎಸ್.ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು ಹಾಗೂ ಪ್ರಕಟಣಾ ಶಾಖೆಯ ಸಿಬ್ಬಂದಿಗೆ ನನ್ನ ನೆನಕೆಗಳು. ವಿಶ್ವ ಕನ್ನಡ ಸಮ್ಮೇಳನದ ಲಾಂಛನವನ್ನು ಸಿದ್ಧಪಡಿಸಿಕೊಟ್ಟ ಹಿರಿಯಕಲಾವಿದರಾದ ಶ್ರೀ ಸಿ. ಚಂದ್ರಶೇಖರ ಅವರಿಗೂ ನನ್ನ ನೆನಕೆಗಳು ಹಾಗೂ ಈ ಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರಾದ

ಶ್ರೀ ಬಿ.ಎಲ್. ಶ್ರೀನಿವಾಸ್ ಮತ್ತು ಸಿಬ್ಬಂದಿ ವರ್ಗದವರಿಗೂ ನನ್ನ ನೆನಕೆಗಳು.

ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಕನ್ನಡ ಓದುಗರಿಗೆ ಹಲವಾರು ವರ್ಷಗಳಿಂದ ದೊರಕದೇ ಇದ್ದ ಎಷ್ಟೋ ಪುಸ್ತಕಗಳು ಲಭ್ಯವಾಗುತ್ತಿರುವುದು ಹೆಮ್ಮೆಯ ಸಂಗತಿ. ಕನ್ನಡದ ಮೇರುಕೃತಿಗಳ ಮರುಮುದ್ರಣ ಯೋಜನೆಯಡಿ ಸಾಹಿತ್ಯಾಭಿಮಾನಿಗಳಿಗೆ ಅಕ್ಷರದಾಸೋಹ ನಡೆಸುವ ಆಶಯ ನಮ್ಮದು. ಈ ಕೃತಿಗಳನ್ನು ಕನ್ನಡಿಗರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

ಮನು ಬಳಿಗಾರ್

ದಿನಾಂಕ ೧೧.೦೧.೨೦೧೧

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಕನ್ನಡದ ಮೇರುಕೃತಿಗಳ ಆಯ್ಕೆ ಸಮಿತಿ

**ಅಧ್ಯಕ್ಷರು**
ಪ್ರೊ. ಎಲ್.ಎಸ್. ಶೇಷಗಿರಿರಾವ್

**ಸದಸ್ಯರು**
ಡಾ॥ ಚಂದ್ರಶೇಖರ ಕಂಬಾರ
ಡಾ॥ ಎಂ.ಎಂ. ಕಲಬುರ್ಗಿ
ಡಾ॥ ದೊಡ್ಡರಂಗೇಗೌಡ
ಡಾ॥ ಅರವಿಂದ ಮಾಲಗತ್ತಿ
ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ
ಡಾ॥ ಪ್ರಧಾನ್ ಗುರುದತ್ತ
ಡಾ॥ ಹಂಪ ನಾಗರಾಜಯ್ಯ
ಡಾ॥ ಎಚ್.ಜೆ. ಲಕ್ಕಪ್ಪಗೌಡ
ಶ್ರೀಮತಿ ಸಾರಾ ಅಬೂಬಕರ್
ಡಾ॥ ಪಿ.ಎಸ್. ಶಂಕರ್
**ಸದಸ್ಯ ಕಾರ್ಯದರ್ಶಿ**
ಶ್ರೀ ಮನು ಬಳಿಗಾರ್, ಕ.ಆ.ಸೇ.
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಮುನ್ನುಡಿ

'ಮಧುರಚೆನ್ನ' ಗೆಳೆಯ ಚೆನ್ನಮಲ್ಲಪ್ಪ ಗಲಗಲಿ, ಹಲಸಂಗಿ ಇವರ ಕವನ ಸಂಗ್ರಹವೊಂದನ್ನು ಪ್ರಕಾಶಗೊಳಿಸಲು ಮುಂದುವರಿದುದಕ್ಕಾಗಿ 'ಕರ್ನಾಟಕ ಸಾಹಿತ್ಯ ಮಂದಿರ'ದವರನ್ನು ಅಭಿನಂದಿಸಬೇಕಾಗಿದೆ. ಜಯಕರ್ನಾಟಕ ಗ್ರಂಥಮಾಲೆಯಲ್ಲಿ ಪವಣಿಸಿದ 'ಪೂರ್ವರಂಗ'ವೆಂಬ ಆಧ್ಯಾತ್ಮ ಕಥಾನಕದೊಡನೆ ಕವನಸಂಗ್ರಹವೂ ಪ್ರಕಟವಾಗಿದ್ದರೆ ಕುಂದಣದಲ್ಲಿ ಕಟ್ಟಿದ ರತ್ನದಂತೆ ಪರಸ್ಪರ ಶೋಭೆಯು ಪುಷ್ಟಿಗೊಳ್ಳುವಂತಿತ್ತು. ಆದರೂ 'ಪೂರ್ವರಂಗ'ವಾದ ಮೇಲೆ ಕಾವ್ಯಕೀರ್ತನ ವಾಗುವುದು ಉಚಿತವೇ ಆಗಿದೆ. ಆದರೆ ಆಗ ಮಾತ್ರ ಈ ಮುನ್ನುಡಿಯ ವಿಶೇಷ ಅವಶ್ಯಕತೆ ಉಂಟಾಗುತ್ತಿರಲಿಲ್ಲ, ಕಾವ್ಯದ ಉಗಮವು ಕವಿಜೀವನದಲ್ಲಿ. 'ಪೂರ್ವರಂಗ'ದಲ್ಲಿ ಕವಿಜೀವನವಿದ್ದರೆ, ಕವಿಕರ್ಮವಾದ ಸಾಹಿತ್ಯವು 'ನನ್ನ ನಲ್ಲ'ವೆಂದು ಅಂಕಿತವಾದ ಈ ಕವನಸಂಗ್ರಹದಲ್ಲಿದೆ. ರಸಿಕರು ಅದರ ಬೆಳಕಿನಲ್ಲಿ ಇದನ್ನು ನೋಡಿದರೆ ಉಚಿತ ವಿಮರ್ಶೆಗೆ ಅನುಕೂಲ ಹೆಚ್ಚು.

ಆದರೆ ಶಿಲ್ಪಿಯ ಪರಿಚಯವಿಲ್ಲದೆ ಅವನ ಕಲೆಯೇ ಅರ್ಥವಾಗದಿದ್ದರೆ, ಅದರ ಸ್ವಾರಸ್ಯವು ತಿಳಿಯದಿದ್ದರೆ, ಹುಟ್ಟಿಸಿದ ದೇವನೇ ತನ್ನ ದೃಷ್ಟಿಯನ್ನು ಕುಟ್ಟಿ ಕೆಡಹಿದಂತೆ. ಕರ್ತಾರನು ಎಷ್ಟೇ ಮಹಿಮಾಶಾಲಿಯಾದರೂ ಯಾವನ ಕೃತಿಯಲ್ಲಿ ಅವನ ಪ್ರತೀತಿಯನ್ನು ಕೊಡುವ ವ್ಯಂಜನಾಶಕ್ತಿ ಇಲ್ಲವೋ ಅವನ ಆ ಕೃತಿಯು ಅವನ ಕರ್ಮವಲ್ಲದೆ ಮತ್ತೇನು? 'ಮಧುರಚೆನ್ನ'ರ ಕೃತಿಯಲ್ಲಿ ವ್ಯಂಜನಾಶಕ್ತಿಯು ವಿಪುಲವಾಗಿದೆ. ಇವರ ಭಾವಾವೇಶವು ರಸಿಕರನ್ನು ಅಂತರ್ಮುಖರನ್ನಾಗಿ ಮಾಡುವದು. 'ಅಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ' ಎಂದು ಇವರು 'ರತ್ನಾಕರ'ನಂತೆ ಸಾರಿದ್ದಾರೆ. ಇಲ್ಲಿಯ ಅಧ್ಯಾತ್ಮ ದೃಷ್ಟಿಯೂ "ಬೇಕಾದರಾಲಿಸುವದು ಬೇಡದಾಗೆ ಪ। ರಾಕು ಮಾಡುವದೆನಗಲ್ಲಿ॥ ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿ। ರಾಕಾಂಕ್ಷಿ' ಎನ್ನುವಂತಿದ್ದರೂ ಸಹೃದಯರು 'ಈತಗಾತ್ಮಧ್ಯಾನವುಂಟಲ್ಲದಿದ್ದರೀ। ಚಾತುರ್ಯವಚನ ವಂತಹುದು॥ ಮಾತು ತಾನೆ ಮನದೊಳಗೆ ಸೂಚಿಸುವದು" ಎಂದೆನ್ನಿಸದೆ ಬಿಡದು.

ಗೆಳೆಯ ಚೆನ್ನಮಲ್ಲಪ್ಪನವರು 'ಮಧುರಚೆನ್ನ'ರೆಂಬ ಆಧ್ಯಾತ್ಮಿಕ ನಾಮಕರಣವನ್ನು 'ಮಧುರಗೀತ'ದಿಂದ ಮೊದಲು ಪಡೆದರೂ ಇವರ ಆಧ್ಯಾತ್ಮಿಕ ಪುನರ್ಜನ್ಮವು

ಇವರು ಆಮೇಲೆ ಬರೆದ 'ನನ್ನ ನಲ್ಲ'ದಲ್ಲಿದೆ. 'ದೇವತಾ ಪೃಥಿವಿ' ಎಂಬ ಕವನವು ಇವರ ಕೃತಿಸತಿಯ ಶಿರೋರತ್ನವಾಗಿದೆಯೆಂದು ನಾನು ಭಾವಿಸಿದ್ದೇನೆ. ಅದು ಅತ್ಯುತ್ತಮವಾದ ಕಾವ್ಯ ಅದರ ಬಗೆ, ಅದರ ಬಂಧ ಒಂದಕ್ಕಿಂತ ಒಂದು ಚಂದ. ಅಲ್ಲಿಯ ಸ್ಥಾಯೀಭಾವ. ಪ್ರಶಾಂತ ಗಾಂಭೀರ್ಯವು, ಸಂಚಾರಿಗಳ ಸಲಿಲಗತಿಯು, ಅದರ ಕರುಣರಂಜಿತವಾದ ದಿವ್ಯವಾತ್ಸಲ್ಯವನ್ನು ಸಹೃದಯರೆದೆಯಲ್ಲಿ ಪಾತಾಳಗಂಗೆಯು ಆಕಾಶಗಂಗೆಯನ್ನು ಚುಂಬಿಸಲು ಹೊರಚಿಮ್ಮುವಳೆಂಬಂತೆ ಹೊಮ್ಮಿಸುವದು. ಈ ಸ್ತುತಿಯು ಅತಿಶಯವಾಗಿ ತೋರಬಹುದು. ಆದರೆ ಕೀಳನ್ನು ಮೇಲೆಂದೆಣಿಸುವ ಬುದ್ಧಿದೌರ್ಬಲ್ಯಕ್ಕಿಂತಲೂ ಲೇಸನ್ನು ಕಂಡು ಲೇಸಾಗಿ ಕೀರ್ತಿಸ ಲಾರದ ಹೃದಯದೌರ್ಬಲ್ಯವು ಹೀನವಾದುದು. ಇಲ್ಲಿ ವಿಮರ್ಶೆಯು ಔಚಿತ್ಯವನ್ನು ಮೀರಿದುದು ನಿಜವಿದ್ದರೆ ನನಗೆ ವಿಮರ್ಶೆ ಸಾಲದೆಂದು ನಾನು ನನ್ನ ದೋಷವನ್ನು ಒಪ್ಪಿಕೊಳ್ಳಬಲ್ಲೆ; ಆದರೆ ಸಂಭವಿಸಬಹುದಾದ ಸಂಕಟದ ಭೀತಿಯಿಂದ ತಣಿದೆದೆಯ ಉಸಿರನ್ನು ಅದೇಕೆ ಬರೆದವರೇ ಹಾಗೆ ಭ್ರಮೆಗಿಂಬುಗೊಂಡಿಲ್ಲವೆಂಬುದನ್ನು ನಾನು ಬಲ್ಲೆ. ಇವರ ಭಾವನೆಯ ಹುಚ್ಚು ಹೊಳೆಯಲ್ಲಿ ಅಲ್ಲಲ್ಲಿ ತೇಲುವ ಅಸ್ತವ್ಯಸ್ತ ಶಬ್ದಗಳು ಶಬ್ದದ ಬೆಡಗು, ಬೆಡಗಿನ ಅರ್ಥದಲ್ಲಿ ಪರಿಣಮಿಸಬಹುದಾದ ಸಂಶಯಾಸ್ಪದ ಸಂದರ್ಭಗಳು. ರಸವರ್ಜ್ಯ ಸತ್ಯವನ್ನು ನೀರಸವಾಗಿ ಹೇಳಬೇಕಾಗಿ ಬರುವ ಅಶಕ್ತಿಯ ವಚನಗಳು, ಶಬ್ದದ ಅಸಾಮರ್ಥ್ಯವನ್ನೂ ಸೂಚಿಸುವವು. ಅಡ್ಡಹಾದಿಯು ಸಾಗಲು ಸಾಕಾಗಬಹುದಾದರೂ ಅದು 'ಮಾರ್ಗ'ವಲ್ಲ ಎಂದು ವಿಮರ್ಶಕರು ಸಾರಿದರೆ ಅದು ರೂಢಿಗೆ ಸರಿಯಾದುದೆಂದು ಒಪ್ಪಲೇಬೇಕು. ಪಾಂಥನಿಗೆ ತನ್ನ ಗುರಿಯ ಎಳೆತ, ನಿಂತವನಿಗೆ ಕ್ರಮಾಕ್ರಮಗಳನ್ನು ನೋಡುವ ಅನುಕೂಲ, ಎರಡೂ ಸಹಜ. ತನ್ನ ಮನದ ಮಾತನ್ನು ಇನ್ನೊಂದು ಮನದಲ್ಲಿ ಇಳಿಸುವ ಸೃಷ್ಟಿಕ್ರಮದಲ್ಲಿಯೇ ಮಾತು ಮುತ್ತಿಟ್ಟಂತಾಗುವದಾದರೂ ಮನಕ್ಕೆ ಮನವು ಕೂಡುವ ಮುನ್ನ ಮುತ್ತೂ ಕೂಡ ಮಾತಿಗೂ ಕೀಳಾಗುವದು. ಎರಡಕ್ಕೂ ರೀತಿಯಿದೆ. ಅದು ಕವಿಹೃದಯ ಸಾಹಿತ್ಯ. (ಸರಸ್ವತ್ಯಾಸ್ತತ್ವಂ ಕವಿಸಹೃದಯಾಖ್ಯಂ ವಿಜಯತಾತ್ ಅಭಿನವಗುಪ್ತ) ಅವರಿಬ್ಬರು ಕೂಡುವ ರೀತಿ. ಆ ಸಾಹಿತ್ಯವೇ ಶಬ್ದಾರ್ಥಸಾಹಿತ್ಯಕ್ಕೆ ಹಾದಿ. ಅವರಿಬ್ಬರೂ ಕೂಡಲು ಒಪ್ಪದಿದ್ದರೆ ಒಪ್ಪುವ ರೀತಿಯು ಉಂಟಾಗಲಾರದು. ಇನ್ನೊಂದು ಮನವನ್ನು ಮುಟ್ಟಬೇಕೆಂಬ ಊರ್ಮಿಯು ಕವಿಯಲ್ಲಿರಬೇಕು. ಅದು 'ಮಧುರಚೆನ್ನ'ರ ಕವನಗಳಲ್ಲಿದೆ. ಎಲ್ಲ ರೀತಿ ದೋಷಗಳನ್ನು ಹೊಡೆದುಹಾಕಬಲ್ಲ ಶಕ್ತಿಯದು. ಅದು ಸಾಹಿತ್ಯಕಲೆಯ ಜೀವಕಳೆ. ಇಂಥವರಿಂದ ಇದಕ್ಕೂ ಉತ್ತಮ ಕಾವ್ಯವನ್ನು ಅಪೇಕ್ಷಿಸಿದರೆ ತಪ್ಪಾಗದು. ಆ ಅಪೇಕ್ಷೆ ನನಗಿದೆ.

ಸಾಧನಕೇರಿ, ಧಾರವಾಡ **–ದ.ರಾ. ಬೇಂದ್ರೆ**

೫ನೇ ಮೇ ೧೯೩೩

# ಕವಿಪರಿಚಯ

'ಮಧುರಚೆನ್ನ'ರು ಚೆನ್ನಮಲ್ಲಪ್ಪ ಎಂಬ ಹೆಸರು ತೊಡಲಿರುವ ಶಿಶುವಾಗಿ ೧೯೦೩ನೇ ಇಸವಿಯ ಜುಲೈ ತಿಂಗಳ ೩೧ಕ್ಕೆ ಜನ್ಮವೆತ್ತಿದರು. ತಾಯಿ ಅಂಬವ್ವ–ತಂದೆ ಸಿದ್ದಲಿಂಗಪ್ಪ; ಊರು ಹಲಸಂಗಿ. ಹಳ್ಳಿಯ ಒಂದು ಸಾಹುಕಾರ ಮನೆತನ ಅವರದು. ಅವರು ಜನ್ಮವೆತ್ತುವ ಹೊತ್ತಿಗೆ 'ಸಾಹುಕಾರ' ಎನ್ನುವದು ಅನ್ವರ್ಥಕ ನಾಮದಿಂದ ಅಡ್ಡಹೆಸರಿಗೆ ಬಂದಿತೆನ್ನಬಹುದು. ಅವರಿಗೆ ತಂದೆಯ ನೇತೃತ್ವದಲ್ಲಿ ಬೆಳೆಯುವ ಸಂದರ್ಭವೊದಗಲಿಲ್ಲ. ತಾಯಿಯ ಅಕ್ಕರೆಯಲ್ಲಿ ಒಬ್ಬನೇ ಒಬ್ಬ ಮಗನಾಗಿ ಬದುಕಿ ಬೆಳೆದರು. ಹಳ್ಳಿಯ ಶಾಲೆಯಲ್ಲಿ ಕಲಿಯುತ್ತ ೧೪ನೇ ವಯಸ್ಸಿಗೆ ಮುಲಕೀ ಪರೀಕ್ಷೆಯಲ್ಲಿ ಹೆಚ್ಚು ಗುಣಗಳನ್ನು ಪಡೆದು ಪ್ರಥಮ ಸ್ಥಾನವನ್ನು ದೊರಕಿಸಿದರು. ಆಯಿತು ಅದೇ ಅವರ ಕೊನೆಯ ಪರೀಕ್ಷೆ. ಆಬಳಿಕ ಅವರು ಇನ್ನಾವ ಪರೀಕ್ಷೆಗೂ ಕುಳಿತುಕೊಳ್ಳಲಿಲ್ಲ. ಆದರೆ ಹನ್ನೆರಡನೇ ವಯಸ್ಸಿನಿಂದಲೇ ಅವರು ತಮ್ಮ ಜೀವನವನ್ನು ಮಹಾ ಅಗ್ನಿಪರೀಕ್ಷೆಗೆ ಈಡುಮಾಡುವ ಸಿದ್ಧತೆ ನಡೆಸಿದ್ದರು. ಪರಮಾತ್ಮನ ಸಲುವಾಗಿ ಜಿಜ್ಞಾಸೆ ತಳೆದು ಆಗಲೇ ಗುರೂಪದೇಶವನ್ನೂ ಪಡೆದರು. ಅದರಿಂದ ತಮಗೆ ಪ್ರಯೋಜನವುಂಟಾಗಲಿಲ್ಲವೆಂಬ ಕಾರಣದಿಂದ ಅವರು ೧೭ನೇ ವಯಸ್ಸಿಗೆ ಪ್ರಚಂಡ ನಾಸ್ತಿಕರೇ ಆಗಿ ನಿಂತರು.

ಗುರೂಪದೇಶದ ಭ್ರಮೆಯು ಬಯಲಾಗುತ್ತಲೇ ಮಾನಸಪೂಜೆಯನ್ನು ಆರಂಭಿಸಿದರಾದರೂ ತರ್ಕದ ಮರ್ಕಟತನವು ಕಾಣಿಸಿಕೊಂಡ ಕಾರಣದಿಂದ ವಿಚಾರದ ತೂಕ ತಪ್ಪಿ, ನಿರಾಶೆಯು ತಲೆಯೆತ್ತಿತು. ಅದರಿಂದ ಆತ್ಮಹತ್ಯೆಯ ತಾರಣೋಪಾಯಕ್ಕೆ ಬಂದರು. ಆಗವರಿಗೆ ೨೨ ವಯಸ್ಸು. "ದೇವರಾಯನ ಹೆಸರನೇಕೆ ಕೇಳಿದೆನಮ್ಮ ನಾನೇಕೆ ನಂಜು ನುಂಗಿದೆನೆ ತಾಯೀ" ಎಂದು ಪರಿತಪಿಸಿದ ಸಂದರ್ಭವು ಇದೇ. "ಯಾವ ಕಡೆಗೂ ಮಗ್ಗಲೂರಗೊಡದಮ್ಮಯ್ಯ ಈ ನೊವ ನಾ ತಾಳಲೆಂತು ತಾಯೀ" ಎಂದು ನರಳಿದ್ದು ಅದಕ್ಕಾಗಿಯೇ.

ಆ ಮೃತ್ಯುಹಾಸದ ಮಸಮಸಕಿನಲ್ಲಿ ಶ್ರೀ ಅರವಿಂದರ ಕೆಲವು ಮಾತುಗಳಿಂದ ಬೆಳಕು ತೋರಿ ಸತ್ಸಂಗ, ಶಾಸ್ತ್ರವ್ಯಾಸಂಗ, ವಿಶ್ವಚಾಲಕನ ಮೇಲೆ ಹೊರಹಾಕಿ ನಿಲ್ಲುವದು ಎಂಬ ಹಾದಿ ಕಾಣಿಸಿಕೊಂಡಿತು. ಆ ಹಾದಿಯಲ್ಲಿಯೂ ಬೀಳುತ್ತೇಳುತ್ತ ಸಾಗಿ ಬೇಸರಿಯುವ ಹೊತ್ತಿಗೆ ಆಪ್ತಸಂಬಂಧಿಕ ಸಾಧುವೊಬ್ಬರ ಸತ್ಯಾಲಾಪದಿಂದ

ಸಮಾಧಾನ ತಂದುಕೊಂಡರು. ಶ್ರೀ ಅರವಿಂದರ 'ವಿಚಾರ ನಿಸ್ತರಂಗೀಕರಣ' ಪದ್ಧತಿಯಲ್ಲಿ ಧ್ಯಾನ, ಮೌನ, ಪ್ರಾರ್ಥನೆಗಳು ದಿನಚರಿಯಲ್ಲಿ ಭಾಗಪಡೆದದ್ದರಿಂದ ಮನಸ್ಸಿಗೆ ಒಂದಿಷ್ಟು ವಿಶ್ರಾಂತಿ ದೊರೆಯಿತಲ್ಲದೆ ಆಕಾಶವನ್ನು ಕುರಿತ ಸ್ಪೆನ್ಸರರ ವಿವೇಚನೆಯು ಅವರಿಗೆ ಹೊಸ ದೃಷ್ಟಿಯನ್ನು ಒದಗಿಸಿತು. ಆಗ ವಯಸ್ಸು ೨೪. ಜಡಸೃಷ್ಟಿಯಿಂದ ಜೀವನ ಸೃಷ್ಟಿಯತ್ತ ಹರಿದು ಜೀವನಸಾಮಂಜಸ್ಯದ ಪ್ರಯೋಗಗಳಲ್ಲಿ ತೊಡಗಿ ಐಕ್ಯಸಾಧನೆಯಲ್ಲಿ ಸಫಲರಾಗಿದ್ದರಿಂದ ಚೆನ್ನಮಲ್ಲಪ್ಪನವರು 'ಮಧುರಚೆನ್ನ' ರಾದರು. 'ನನಗೆ ನೀನತಿ ಮಧುರ' ಎಂದು ಯಾವ ಸ್ನೇಹಿತನನ್ನು ಕುರಿತು ಹಾಡಿದರೋ ಅದೇ ಸ್ನೇಹಿತನ ಹೆಸರು ಮೊದಲಾಗಿ, 'ನಿನಗೆ ನಾ ಬಲು ಚೆನ್ನ' ಎನಿಸಿದವರ ಹೆಸರು ಕಡೆಯಲ್ಲಿ ಬಂತು.

ಹೆಸರು ಮಾರ್ಪಟ್ಟಿದ್ದು ಮೊದಲಿಗೆ; ಪುನರ್ಜನ್ಮ ಪ್ರಾಪ್ತವಾದುದು ಹಿಂದುಗಡೆ. ೧೪ ವರುಷದಾ ರಾಮರಾ ವನವಾಸದಲ್ಲಿ ಗರ್ಭಿಣಿಯ ನವಮಾಸದಲ್ಲಿ ಬಳಲಿ, ಕುದಿಕುದಿದು ಬೇಯುವಾ ಬರಗಾಲದುಪವಾಸದಲ್ಲಿ ಕೊರಗಿ, ಸೊರಗಿ, ಕರಗಿ ನೀರಾಗಿ ಮೃತ್ಯುಹಾಸಕ್ಕೀಡಾಗಿ, ಚೆನ್ನಮಣಿಯ ಮೂವರು ಮೂಲ ಗುರುಗಳಲ್ಲಿ ಪ್ರಮುಖನಾದ ರೋಗರಾಯನ ಸಹವಾಸದಿಂದ ಸಾಧನೆಯು ಪರಮಾತ್ಮನ ಪ್ರಗಾಢ ಸಂಸ್ಪರ್ಶಕ್ಕೆ ಹಾದಿಯನ್ನು ಒದಗಿಸಿಕೊಂಡಿತು. ಮಹಾ ನಿಶ್ಶಬ್ದವಾಗಿದ್ದರೂ ಶಬ್ದದಾಚೆಯ ಶಬ್ದದ ಉಲುಹಿನಲ್ಲಿ, ಪರಮ ನಿಸ್ಸೀಮವಾಗಿದ್ದರೂ ಶೂನ್ಯವಿಲ್ಲದ ಅಲುಗಿನಲ್ಲಿ ದಿವ್ಯ ಸ್ಪರ್ಶವೊಂದು ಒಳಗು–ಹೊರಗೆನ್ನದೆ, ಸುತ್ತುಮುತ್ತೆನ್ನದೆ, ಮೇಲುಕೆಳಗೆನ್ನದೆ ಎತ್ತೆತ್ತಲೂ ಅನುಭವಕ್ಕೆ ಬಂದಿತು. ಅದೇ ಆತ್ಮವಿಜ್ಞಾನದ ಪೂರ್ವರಂಗ.

ಬರಬೇಕಾಗಿದ್ದುದು ಬರುವ ಕಾಲಕ್ಕೆ ಬರುವುದಾದರೂ ಅದು ಘನಸಿರಿಯಾಗಿ ಬರುವದು. ಬೆಳಗು ಬಂದಂತೆ ಹೊಳೆ ಬಂದಂತೆ ಬಂತೆಂದರೂ ಇದ್ದುದಿದ್ದೇ ಇರುವದು. ಮುಂದೆ ಅದೇ ಕಾಳರಾತ್ರಿಗೆ ಬೀಜವಾಗಿ ನಿಲ್ಲುವದು. ಕಂಡುಂಡಿದ್ದು ಸತ್ಯವೋ–ಅಲ್ಲವೋ ಎಂಬ ಸಂಶಯವೇ ಮಡುವುಗಟ್ಟಿ ಬಂದು ಕಾಳರಾತ್ರಿಯನ್ನು ಹರಡುತ್ತದೆ. ಕತ್ತಲೆಯಲ್ಲಿ ಎಡವಿ, ಮುಗ್ಗರಿಸಿ ಬಿದ್ದು, ಎದ್ದು ಸಂಕಟಗಳ ಸೇನೆಯೊಡನೆ ಹೋರಾಡಬೇಕಾಗುತ್ತದೆ. ಅನಾರೋಗ್ಯ, ಪ್ರತಿಕೂಲ ಪರಿಸ್ಥಿತಿ ಇವು ಹತ್ತೂ ನಿಟ್ಟಿಗೆ ಉರಿಯನ್ನು ಹೊತ್ತಿಸಿ ಸಾಧಕನನ್ನು ಮಾಸತಿ ಮಾಡಿ ನಿಲ್ಲಿಸಿದವು. ಹೊತ್ತಿಗೆ ಬೆಳಗಿನ ಸೂಚನೆಗಳು ಕಾಣತೊಡಗಿದವು. ಮುಂದೆ ಬೆಳಗು ಬಂದೇಬಿಟ್ಟಿತು. ಆಗ "ಇದು ಬರಿ ಬೆಳಗಲ್ಲೋ ಅಣ್ಣಾ" ಎಂದು "ಅಣ್ಣ ಬೇಂದ್ರೆ"ಯವರ ಹಾಡಿನಲ್ಲಿ ದನಿಗೂಡಿಸಿ ಹಿಗ್ಗಿದರು.

ಇಷ್ಟು ಕಥೆ ಮುಗಿಯಲಿಕ್ಕೆ ೧೮ ವರುಷಗಳು ಬೇಕಾದವು. ಅಷ್ಟು ಕಾಲ ಕರ್ತಾರನ ಕಮ್ಮಟದಲ್ಲಿ ಸುಟ್ಟು ಸುಣ್ಣಾಗಿ, ಕೊರಗಿ ಸಣ್ಣಾಗಿ ಜೀವಿತದಲ್ಲಿಯೇ

ಪುನರ್ಜನ್ಮವನ್ನು ಪಡೆಯುವ ಹೊತ್ತಿಗೆ ಅವರಿಗೆ ೩೦ ವರುಷಗಳಾಗಿದ್ದವು.

ಮಧುರಚೆನ್ನರು ಗೆಳೆಯರೋಲಗ ಕಟ್ಟಿದ ಶ್ರೀ ಬೇಂದ್ರೆಯವರ ಸಂಬಂಧವನ್ನು ಬಹು ತೀವ್ರವಾಗಿ ಗಳಿಸಿಕೊಂಡರು. ಮಧುರಚೆನ್ನರಿಗೆ ಆಗ ಹದಿನೆಂಟು ವರುಷ ತುಂಬಿರಬಹುದು. ಅಂದಿನಿಂದ ಕೊನೆಯವರೆಗೆ ಅವರು ಅಣ್ಣತಮ್ಮಂದಿರಾಗಿ ನಡೆದುಕೊಂಡರು. ಮೂವತ್ತೆರಡು ವರುಷದ ದೀರ್ಘಾವಧಿಯ ಗೆಳೆತನಕ್ಕೆ ಜಾತಿ, ಮತ, ಪಂಥ ಸ್ವಭಾವ ಇವಾವವೂ ಅಡ್ಡ ಬರಲಿಲ್ಲ. ಒಬ್ಬರು ಹಳ್ಳಿಯ ಬಾಳು, ಅಲ್ಪ ಶಿಕ್ಷಣ, ಅನಾರೋಗ್ಯ, ವಿರಶೈವಜಾತಿ, ಒಕ್ಕಲುತನದ ಬದುಕು ಇವುಗಳಲ್ಲಿ ಬೆಳೆದವರಾದರೆ; ಇನ್ನೊಬ್ಬರು ಪಟ್ಟಣ ಜೀವನ, ಉಚ್ಚ ಶಿಕ್ಷಣ, ಆರೋಗ್ಯ, ಬ್ರಾಹ್ಮಣ ಜಾತಿ, ಸುಸಂಸ್ಕೃತ ಬದುಕು ಇವುಗಳಲ್ಲಿ ಬೆಳೆದವರು. ಒಂದು ಮುಖ ಪೂರ್ವಕ್ಕೆ ಇನ್ನೊಂದು ಪಶ್ಚಿಮಕ್ಕೆ. ಹಳ್ಳಿಯ ಶಾಲೆಯಲ್ಲಿ ಶಿಕ್ಷಣ ಮುಗಿಸಿದ ಮಧುರಚೆನ್ನರ ಮುಖ ಪಶ್ಚಿಮಕ್ಕೆ; ವಿಚಾರ ಸರಣಿ ಪಾಶ್ಚಾತ್ಯರದು! ಪದವೀಧರರಾಗಿರುವ ಶ್ರೀ ಬೇಂದ್ರೆಯವರ ಮುಖಪೂರ್ವಕ್ಕೆ; ವಿಚಾರಸರಣಿ ಪೌರ್ವಾತ್ಯರದು! ಅವರ ದೃಷ್ಟಿ ವಿರೋಧವಾಗಿದ್ದರೂ, ಅವರ ಕಾಣ್ಕೆಯಲ್ಲಿ ಬಹು ಅಂತರವಾಗಿದ್ದರೂ ಅವರು ಒಬ್ಬರಿಗೊಬ್ಬರು ಹತ್ತಿರದಲ್ಲಿಯೆ ಇದ್ದರು. "ನನ್ನ ನಿನ್ನ ಬೆನ್ನ ಬಳಿ ವಿಶಾಲ ವೃಕ್ಷ ಬೆಳೆದಿದೆ" ಎಂದು ಶ್ರೀ ಬೇಂದ್ರೆಯವರು ಹಾಡಿ ಆ ಮಾತಿಗೆ ಅಂಕಿತ ಹಾಕಿದ್ದಾರೆ. ದಿ. ಮಧುರಚೆನ್ನರು ಸಹ 'ಬೆನ್ನು ಬೆನ್ನಲಿ ಬೆಸೆದ ಏಕತೇಜದ ಎರಡು ಹಿರಿಕಿರಿಯ ಪಿಂಡಗಳೆಂ"ದು ವಿನಯಿಸಿದ್ದಾರೆ. ಶ್ರೀ ಬೇಂದ್ರೆಯವರು ಹೇಳುವ ವಿಶಾಲ ವೃಕ್ಷವಾಗಲಿ, ಶ್ರೀ ಮಧುರಚೆನ್ನರು ಹೇಳುವ ಏಕತೇಜವಾಗಲಿ ಆ ಇಬ್ಬರು ಗೆಳೆಯರನ್ನು ಬೆಸಿಕೆ ಹಾಕಿದೆ. ಶ್ರೀ ಅರವಿಂದಯೋಗಿಗಳ ಹೃದಯಸ್ಥ ವಿಶ್ವಭಾನುವೇ ಅವರಲ್ಲಿ ಐಕ್ಯವನ್ನು ತಂದಿದೆ. ಸಮರಸತೆಯನ್ನು ಕರುಣಿಸಿದೆ.

ಅವರಿಬ್ಬರೂ ಪರಸ್ಪರರನ್ನು ಮೊದಲಿಗೆ ಕಂಡಾಗ ವ್ಯಕ್ತಿಯನ್ನಷ್ಟೇ ಕಾಣಲಿಲ್ಲ. ಪರಸ್ಪರರ ಕಣ್ಣುಮುಂದೆ ಮೊಳಕೆ ಮಾತ್ರ ನಿಂತಿದ್ದರೂ ಅದರಲ್ಲಿ ಅವರಿಗೆ ಬೆಳೆಯ ಸಿರಿಯೇ ಕಂಗೊಳಿಸಿತು. ಅದು ಬಹಳ ಹಿಂದಿನ ಮಾತು. ಆಗ ಶ್ರೀ ಬೇಂದ್ರೆಯವರು "ಪಡೆದಪ್ಪನಾಗು" ಎಂದು ಮಧುರಚೆನ್ನರನ್ನು ಬಾಯ್ತುಂಬ ಹರಸಿ, ಕೈತುಂಬ ಸ್ನೇಹಸ್ಪರ್ಶವನ್ನು ಸವರಿದರು.

**"ಎರೆಯುವೆನು ಬಾ ನಿನ್ನ ನಮ್ಮ ಪಟ್ಟದ ಮರಿಯೆ**
**ಸಕಲ ತೀರ್ಥದ ಕ್ಷೀರನೀರ ತಂದು।**
**ಬೆರಗಾಗಿ ಬೆರೆತು ಆ ಶಿವನಲ್ಲಿ ದೇವನಲಿ**
**ಪಡೆದಪ್ಪನಾಗು ಎಂದು॥"**

ಹಾಗೆ ಎರೆಯುವದಕ್ಕೆ ನಿಸ್ಸಂಗಳೂ ಗುಪ್ತಗಂಗೆಯೂ ಆದ ಶಾಲ್ಮಲೆಯ

ನೀರು ತಂದಿದ್ದಾರೆ. ಹರಿಹರರರ ಕಾಲ್ತೊಳೆವ ದಕ್ಷಿಣದ ಗಂಗೆಯೆನಿಸಿದ ತರಂಗ ಭದ್ರೆಯ ಪುಣ್ಯಜಲವನ್ನು ತಂದಿದ್ದಾರೆ. ನಮ್ಮ ತಾಯ ಸೆರಗಿನಂಚಾಗಿರುವ ಗೋದೆಯ ದಿವ್ಯಜಲವನ್ನೂ, ನಮ್ಮ ತಾಯಿಯ ದಿವ್ಯ ಶ್ರೀರಂಗಪಾದ ತೊಳೆವ ಕಾವೇರಿಯ ಜಲವನ್ನೂ ಮರೆಯದೆ ತಂದಿದ್ದಾರೆ. ವಿಠ್ಠಲನ ಅಡಿಯನ್ನು ಬಿಟ್ಟುಮುಟ್ಟುವ ಭೀಮೆಯ ನೀರನ್ನಾಗಲಿ; ಕರಿನಾಡ ಕನ್ಯೆಯಾದ ಕೃಷ್ಣೆಯ ನೀರನ್ನಾಗಲೀ ಬಿಡುವರೇ? ಕನ್ನಡ ಕವಿತಿಲಕರ ಕಾವ್ಯಗಂಗೆಯ ಉಗಮಸ್ಥಾನದ ಪವಿತ್ರ ಜಲವನ್ನೂ, ಘನ್ನ ತೀರ್ಥಂಕರರ ಪೂಜ್ಯಪಾದಗಳ ಗುರುಪಾದ ತೀರ್ಥವನ್ನೂ, ಉಡುಪಿಯೊಡೆಯನ ಅಡಿಯನುಡಪಮಾಡುವ ಆನಂದ ತೀರ್ಥವನ್ನೂ ಅಲ್ಲದೆ, ಹಂಪುಗೊಳಿಸುವ ದೇವಿಯೊಲಿದ ಮಾಧವನ ವಿದ್ಯಾತೀರ್ಥವನ್ನೂ ತಂದಿದ್ದಾರೆ. ಅಂತೆಯೆ ಆ ಹರಕೆ ಸ್ಮಾರಕವಾಗಿ ಮಧುರಚೆನ್ನರು ನಿಜವಾಗಿಯೂ ಪಡೆದಪ್ಪನಾಗಿ ನಿಂತರು. ಅದಲ್ಲದೆ "ಈ ನಾಡು ಅವನ ಹೊಲ' ಇದರ ಒಕ್ಕಲಿಗನವ, ನಾ–ನೀನು ರಂಟೆ–ಕುಂಟೆ" ಎಂಬ ಹೂಣಿಕೆ ತೊಟ್ಟು ನಿಂತರು. ಅದರಿಂದ ಕನ್ನಡದಲ್ಲಿ ಹೊಸ ಕಾವ್ಯದ ಕೃಷಿ ನಡೆಯಿತು. ಜಗದ ಪಟ್ಟವನ್ನೇರಿ ಕುಳಿತ ಜಗದ್ಗುರುವಿನ ಅಡಿಯ ಹುಡಿಯಾಗಿ ಬಿದ್ದು, ಗಗನಾಂಗಣದ ಬೆಳಕಿನ ಕುಡಿಯಂತೆ ಮೇಲೆದ್ದು ಅವರಿಬ್ಬರೂ ಬೆಳಗಿದರು. ಅವರು ಸೋಲಿಗೆ ಮೃತ್ಯುಲೋಕದ ಸೊಲ್ಲೆಂದರು; ಅದು ಹುಂಬರ ಗುಲ್ಲೆಂದರು. ಸೋಲುವವ ಶರಣನಲ್ಲ, ಗೆಲುವೇ ನಮ್ಮ ನಲ್ಲನ ಸೊಲ್ಲೆಂದರು. ಅವರಿಬ್ಬರಿಗೂ ಮೀಸಲಾದ ಬಿರುದು ಯಾವುವೆಂದರೆ–

**"ಉಸುರು ಉಸುರಿಗೆ ಅವನ ಹೆಸರು ಸಾರುತ್ತಿರುವ**
**ಗಾಳಿಯಂದದಿ ನಾವು ಚಲಿಸಬೇಕು**
**ಹೆಸರು ಹೆಸರಿಗೆ ಅವನ ಕುಸುರು ತೋರುವ ಹಾಗೆ**
**ಬೆಳಕನ್ನು ಸುರಿಸಬೇಕು."**

ಈ ಬಗೆಯಾಗಿ ಒಂದು ಬೊಡ್ಡೆಗೆ ಒಡೆದ ಎರಡು ಟಿಸಿಲುಗಳಂತೆ ೩೨ ವರುಷ ಉತ್ತರೋತ್ತರವಾದ ಆತ್ಮೀಯತೆಯಿಂದ ಬಾಳಿ ಬದುಕಿದ ಆದರ್ಶವು ಬ್ರಾಹ್ಮಣ–ಲಿಂಗಾಯತ ಕೂಡಿಕೊಂಡು ಬಾಳುವುದಕ್ಕೆ ಶಕ್ಯವೆನ್ನುವ ಮಾತಿಗೆ ಭರವಸೆ ಕೊಡಲಾರದೇ? ಈ ಆದರ್ಶವನ್ನು ಬದುಕುವಲ್ಲಿ ಅವರಿಬ್ಬರಿಗೂ ತಿಳಿಯದೆ ವ್ಯವಹಾರಿಕವಾಗಿ ಸಾಕಷ್ಟು ಹಾನಿಯಾಗಿದೆ. ಇಲ್ಲವೆ ಬರಬೇಕಾದಷ್ಟು ಲಾಭ ಬರದೆ ಹೋಗಿದೆ.

ಒಂದು ಹುರಿಯ ಅವಳಿ ಮಕ್ಕಳಲ್ಲಿ ಒಂದಕ್ಕೆ ನೋವಾದರೆ ಮತ್ತೊಂದು ನರಳುವದಂತೆ. ಒಂದರ ನೋವಿಗೆ ಇನ್ನೊಂದು ಸಾಂತ್ವನಪಡಿಸುವದಂತೆ. ಮಧುರಚೆನ್ನರ ಮನಹತ್ತಿ ಉರಿಯುವಾಗ ಅಗಾಧವಾದ ಹರಕೆಯೆರೆಯುತ್ತ

ಶ್ರೀ ಬೇಂದ್ರೆ ಅವರು 'ಪಡೆದಪ್ಪನಾಗು' ಎಂದು ಹಾಡಿದರಷ್ಟೇ? ಅದರಂತೆ ಶ್ರೀ ಬೇಂದ್ರೆಯುವರ ಬಗೆಯು ಬೇಗೆ ತಣಿಯುಲೆಂದು ಮಧುರಚೆನ್ನರು 'ಮಂಗಲಸಪ್ತಕ'ವನ್ನು ಹಾಡಿದ್ದಾರೆ. ಕಾಲರುದ್ರನನ್ನೂ, ಮಾರಹರನನ್ನೂ ಪ್ರಾರ್ಥಿಸಿ. ಅಣ್ಣ ದತ್ತನ–ಮಿತ್ರ ದತ್ತನ ಮಂಗಲವನ್ನು ಹಾರಯಿಸಿದ್ದಾರೆ. ಮಹಾವೀರ, ಬುದ್ಧ ದೇವರಲ್ಲದೆ ನಿರ್ಜರತರಂಗಿಣಿಯೂ, ಪ್ರಭುದೇವರೂ ಬಂದು– ಅಣ್ಣ ದತ್ತಾತ್ರಯನ ಮನವನ್ನು ಮಡಿಗೊಳಿಸಿ, ಅವನ ಬಿಲದ ಬರ್ದಿಲಲ್ಲಿ ಗುಹ್ಯಜ್ಯೋತಿಯನ್ನು ಬೆಳಗಿಸಿರಿ ಎಂದು ಹಾರ್ದಿಕವಾಗಿ ಮೊರೆಯಿಟ್ಟಿದ್ದಾರೆ.

ಇಬ್ಬರೂ 'ಅಂಬಿಕೆ'ಯರ ಮಕ್ಕಳು. ಒಬ್ಬರು ಜ್ಞಾನಮಾರ್ಗದಲ್ಲಿ ನಡೆದರೆ, ಇನ್ನೊಬ್ಬರು ಭಕ್ತಿಮಾರ್ಗದಲ್ಲಿ ಸಾಗಿದ್ದಾರೆ. ಜ್ಞಾನಜ್ಯೋತಿಯಿಂದ ಭಕ್ತಿ ಒಬ್ಬರಲ್ಲಿ ಬೆಳಗಿದರೆ, ಭಕ್ತಿಯ ಹಣತಿಯಿಂದ ಜ್ಞಾನದೀಪವು ಇನ್ನೊಬ್ಬರಲ್ಲಿ ಮಿನುಗಿದೆ. ಅವರಿಬ್ಬರೂ ನಡೆಯಿಸಿದ ಜೀವನದ ಅದ್ಭುತ ರಸಾಯನದ ಪ್ರಯೋಜನವು ಕನ್ನಡನಾಡಿಗೆ ಇನ್ನೂ ಆಗಬೇಕಾಗಿದೆ. ಈ ಕಾವ್ಯಯೋಗಿಗಳ ಕಾವ್ಯಾಭ್ಯಾಸವು ಕನ್ನಡನಾಡಿನಲ್ಲಿ ತಿಳವಾಗಿ ನಡೆದರೆ ನಾಡಿನೊಡನೆ ರಾಷ್ಟ್ರಕ್ಕೂ ಪರಮೋಪಕಾರವಿದೆ.

ಸುಮಾರು ಮೂವತ್ತು ವರುಷಗಳ ಹಿಂದೆಯೇ 'ಅಂಬಿಕಾತನಯದತ್ತ'ರಾದ ಶ್ರೀ ಬೇಂದ್ರೆ ಅವರು ಮಧುರಚೆನ್ನರನ್ನು ಕುರಿತು "ಎಂದೂ ಅಗಲದ ಗೆಳೆಯನಿಗೆ" ಕವಿತೆ ಬರೆದರು. ಅಂದರೆ ಅದನ್ನು ಬರೆದು ಮೂವತ್ತು ವರುಷ ಕಳೆದ ಬಳಿಕ ಮಧುರಚೆನ್ನರು ಅಗಲಿದರೆನ್ನೋಣ. ಅದರಲ್ಲಿ "ಮುಗಿಲ ತುದಿಗಿದ್ದರೂ ನನ್ನ ಬದಿಗಿರುವಂಥ ವಿಶ್ವದಗಲದ ನನ್ನ ಗೆಳೆಯ" ಎಂದಿದ್ದಾರೆ. "ಜನ್ಮವಗಲಿಸಲಾರದ್ದನ್ನು ಹೊತ್ತು ಹೊತ್ತಿನ ಕುತ್ತು ಅಡ್ಡ ಬಂದು ಅಗಲಿಸಬಹುದೇ?" ಎಂದು ಕೇಳಿದ್ದಾರೆ.

**"ಇಂದಿನೀ ಗೆಳೆತನವು ಹಿಂದಿನಿಂದಲೆ ಬಂತು**
**ಮುಂದೆ ಜನ್ಮಾಂತರದಿ ಸಾಗಿಸಾಗಿ।**
**ಹೊಂದಿರುವ ಪಕಳೆಗಳ ಹಿಂದೆ ಕೇಸರದಿಂದ–**
**ನೇಕ ಬೀಜದ ಏಕಫಲವು ಆಗಿ॥"**

ಎಂಬ ಸನಾತನ ಸತ್ಯವನ್ನು ನೆನೆದು ಗೆಳೆಯನ ಮಹಾ ಅಗಲಿಕೆಯನ್ನು ಸಹಿಸಿಕೊಳ್ಳಲು ಸಿದ್ಧತೆ ಮಾಡಿಕೊಂಡಿದ್ದಾರೆ.

ದಿ. ಮಧುರಚೆನ್ನರು ಅಖಿಲ ಕರ್ನಾಟಕದಲ್ಲಿಯೇ ಒಬ್ಬ ವಿಲಕ್ಷಣ ರಸರ್ಷಿಗಳೆಂದು ಪ್ರತೀತರಾದರು. ಅವರು ಕನ್ನಡ ಕವಿಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಮಾಡಿದ ಭಾಷಣವು ಹೊಸಗನ್ನಡ ಕಾವ್ಯದಲ್ಲಿ ಅನುಭಾವ ಸಾಮಗ್ರಿಗಳಿಗೆ ಎಂಥ ಉಚ್ಚ ಸ್ಥಾನವಿದೆಯೆಂಬುದನ್ನು ಕ್ರೋಢೀಕರಿಸಿದ ಉತ್ತಮ ಪ್ರಬಂಧವಾಗಿದೆ.

ಸಂಶೋಧನಾತ್ಮಕ ಲೇಖನವಾಗಲಿ, ಶಿಲಾಲಿಪಿಗಳ ವಾಚನವಾಗಲಿ ಅವರ

ಅಗಾಧವಾದ ಆತ್ಮದೃಷ್ಟಿಗೆ ಸಾಕ್ಷಿಯೆನ್ನಬಹುದು.

"ಮಧುರಗೀತವೆಂಬ ಸ್ನೇಹಸೂಕ್ತವನ್ನು ಅಮರವಾಗಿ ಹಾಡಿದರು. ಇಂಗ್ಲೀಷಿನ ಸಂಪರ್ಕವಿಲ್ಲದ ಅವರು ಕೇವಲ ಆಧ್ಯಾತ್ಮಿಕ ಪಿಪಾಸೆಯಿಂದ ಪ್ರೇರಿತರಾಗಿ ಪದವೀಧರರಿಗಿಂತ ಹೆಚ್ಚಾಗಿ ಆಂಗ್ಲಸಾಹಿತ್ಯವನ್ನು ಅಭ್ಯಾಸ ಮಾಡಿದರು. ಸಾಹಿತ್ಯಕ್ಕೆ ವಿಶಿಷ್ಟ ಸೇವೆಸಲ್ಲಿಸುವ ಗುಂಪೊಂದನ್ನು ನಿರ್ಮಿಸಿದರು."

"ಸಾಹಸ, ತಾಳ್ಮೆ, ಪರಿಶ್ರಮ, ಅದ್ಭುತ ಅನುಭವ, ಸತ್ಯಪ್ರಮಾಣಗಳನ್ನು ಕುರಿತ ನಿಷ್ಠೆ ಇವು ಲೌಕಿಕ ವಿಷಯಗಳ ಸಂಶೋಧನೆಗೂ ಆವಶ್ಯಕವಾಗಿರುವಾಗ, ಪಾರಮಾರ್ಥಿಕ ಸಂಶೋಧನೆಗೆ ತೊಡಗಿದ ಮಧುರಚೆನ್ನರು ಇವುಗಳನ್ನೆಲ್ಲ ಅಳವಡಿಸಿಕೊಂಡು ಸ್ವತಃ ತಮ್ಮ ಬಾಳನ್ನೇ ಪ್ರಯೋಗಕ್ಕೆ ಒಡ್ಡಿ ಆತ್ಮಸಂಶೋಧನೆ ನಡೆಸಿದ ಅಪೂರ್ವ ವ್ಯಕ್ತಿಯಾಗಿದ್ದಾರೆ. ಅವರು ತಮ್ಮ ಬಾಳಿನಿಂದ, ವ್ಯಾಸಂಗದಿಂದ, ಸಾಧನೆಯಿಂದ ನಮ್ಮ ನಾಡಿನಲ್ಲಿ ಹೊರಹೊಮ್ಮಿಸಿದ ಬೆಳಕು ನಮ್ಮ ನಾಡಿನ ಇಂದಿನ ವೈಭವವಾಗಿದೆ."

"ಅವರು ಮಧುರಚೆನ್ನರಾಗಿ 'ನನ್ನನಲ್ಲ'ನನ್ನು ಕಂಡ ಆ ಅನುಭಾವದ ಮುಂಬೆಳಗಿಗೆ ತೃಪ್ತಿಗೊಳ್ಳದೆ ಪರಾಪ್ರಕೃತಿಯ ಪ್ರೇಮಕ್ಕಾಗಿ ಹಂಬಲಿಸಿ 'ದೇವತಾ ಪೃಥಿವಿ' ಕವನವನ್ನು ಹಾಡಿದ್ದಾರೆ." ಅವರ ಕವಿತೆಗಳಲ್ಲಿ ಶಿರೋರತ್ನವೆಂದರೆ ಅದೇ ಆಗಿದೆ. ಅದೇ ಅವರ ಜೀವನದ ಉತ್ತರ.

**ಮೊಲೆಹಾಲ ರುಚಿಗೊಂಡು ಮನದ್ವಾಲ ಬಯಸೇನ**
**ಗುಟುಗುಟುಕಿಗೊಮ್ಮೆ ಮಿಕಿಮಿಕಿ। ಏಳಮ್ಮಾ।**
**ಹಸಿವೀಗಿ ಮೊಲೆಯುಂಡೆ ಕಸಿವೀಸಿಗೇನುಳ್ಳೆ**
**ಹಾಲೊಲ್ಲೆ ಸಾಕು ಬಿಗಿದಪ್ಪು ಏಳಮ್ಮಾ।**
**ಮೊಲೆಹಾಲು ಸಾಕಮ್ಮಾ ಸವಿಲಾಲಿ ಬೇಕಮ್ಮಾ**
**ಮುದ್ದಾಡಿ ರಮಿಸಿ ಮೈದಡವ। ಏಳಮ್ಮಾ।**

ಕವಿಯ ತನುವನ್ನು ನಿಸಿದಿಗೆಗಲ್ಲು ಮಾಡಿರದಿದ್ದರೆ ಮನವನ್ನು ಮಾಸತಿ ಕಲ್ಲು ಮಾಡಿರದಿದ್ದರೆ ಸಾಧನೆಯೊಂದು ವೀರಗಲ್ಲು ಆಗಿ ನಿಲ್ಲುತ್ತಿರಲಿಲ್ಲ. ಕಾವ್ಯರ್ಷಿಯ ಪ್ರಕೃತಿಯ ಅಣುರಚನೆಯೇ ಬೇರೆಯಾಗಿತ್ತು. ಅವರು ಹುಟ್ಟಾ ಕಮಲ. ಕೆಸರಲ್ಲಿ ಹುಟ್ಟಿದರೂ ಕಿತ್ತುಕೊಂಡು ಮೇಲೆದ್ದು ಮುಗಿಲಿಗೆ ಮುಖಮಾಡಿ ನಿಲ್ಲುವದನ್ನು ಅದಕ್ಕೆ ಯರೂ ಕಲಿಸಲಾರರು. ಕವಿಯ ಮಾತಿನಲ್ಲಿಯೇ ಆ ಪ್ರಶ್ನೋತ್ತರಗಳು ಕಂಗೊಳಿಸುತ್ತವೆ.

**ಏಳು, ಕಮಲವೆ ನಿನ್ನ**
**ಯಾವ ಕರ್ಮದಿ ಬಂದು**

**ಇಂಥ ಕೆಸರಲ್ಲಿ ಬಿದ್ದೇ?**
**ಹೇಳು, ಕಮಲವೆ ನಿನ್ನ**
**ಯಾವ ಪುಣ್ಯದಿ ಮತ್ತೆ**
**ಮೊಗವೆತ್ತಿ ಮೇಲಕ್ಕೆದ್ದೇ?**

ಆದರೆ 'ಆರು ಬಿತ್ತಿದರು ಉರಿಯ ಬಿತ್ತವನು ನಿನ್ನ ಒಡಲಿನಲ್ಲಿ?' ಎಂದು ಕೇಳುವವರಿಗೆ, ಬೆಳೆ ಕೊಡಬೇಕೆಂದು ಅಕ್ಕರೆಪಡುವವನೇ ಅದನ್ನು ಬಿತ್ತಿದನೆಂದು ಧಾರಾಳವಾಗಿ ಹೇಳಬಹುದಾಗಿದೆ. ಆ ಫಸಲು ಜೀವಕೋಟಿಯನ್ನೇ ತಣಿಸಬಲ್ಲದು; ಉಣಿಸಬಲ್ಲುದು. ಜೀವನದ ಅಂಥ ಮಹಾ ಕೃಷಿ ನಡೆಸಿದ 'ರಂಟಿಕುಂಟಿ'ಯ ಹೆಚ್ಚು ಪರಿಚಯಕ್ಕೆ 'ನನ್ನ ನಲ್ಲ'ವನ್ನು ಕೈಗೆತ್ತಿಕೊಳ್ಳಬೇಕು.

'ನನ್ನ ನಲ್ಲ'ನ ಅಕ್ಕರೆಯ ನಲ್ಲೆಯಾಗಿ, ಮಹಾ ಜನನಿಯಾದ ಜಗದಂಬಿಕೆಯ 'ಶಿಶುವಾಗಿ, ಕವಿಋಷಿಯ ೧೯೫೩ನೇ ಆಗಸ್ಟ್ ೧೫ಕ್ಕೆ ದೇಹಬಿಟ್ಟು ನಮ್ಮನ್ನು ಅಗಲಿದರು. ಅಂದು ಭಾರತಸ್ವಾತಂತ್ರ್ಯದ ಹಬ್ಬ; ಶ್ರೀ ಅರವಿಂದರ ಜಯಂತಿ; ಅಲ್ಲದೆ ಶ್ರೀ ರಾಮಕೃಷ್ಣ ಪರಮಹಂಸರ ಪುಣ್ಯತಿಥಿ. ಅಂಥ ಪರ್ವ ಕಾಲದಲ್ಲಿ ಗುರುಚರಣಗಳನ್ನು ಅಲಂಕರಿಸಿದ ಅರಳುಮಲ್ಲಿಗೆಯಂತೆ ಕವಿಯ ಜೀವನದ ಧನ್ಯತೆಯನ್ನು ಬಗೆಯುವದು ಅನಿವಾರ್ಯವಾಗಿದೆ.

೧೫–೦೮–೫೫ **–ಸಿಂಪಿ ಲಿಂಗಣ್ಣ, ಚಡಚಣ**

# ಕೃತಜ್ಞತೆ

ಕರ್ನಾಟಕ ವಿಶ್ವವಿದ್ಯಾಲಯದ ಪಠ್ಯಪುಸ್ತಕ ಸಮಿತಿಯವರು ೧೯೭೩–೭೪ರ ಶೈಕ್ಷಣಿಕ ವರ್ಷದಲ್ಲಿ ತಮ್ಮ ವಿಶ್ವವಿದ್ಯಾಲಯದ ಬಿ.ಎ.–೧ರ ಕನ್ನಡ ಮುಖ್ಯ ವಿಷಯಕ್ಕೆ ಈ ಪುಸ್ತಕವನ್ನು ಪಠ್ಯಪುಸ್ತಕವನ್ನಾಗಿ ಆಯ್ದುಕೊಂಡುದಕ್ಕೆ ಅವರಿಗೆ ನಮ್ಮ ಕೃತಜ್ಞತೆಗಳು.

ಹಲಸಂಗಿ
೩೧–೦೭–೧೯೭೩

**ಸಂಚಾಲಕ**
**ಚೆನ್ನಬಸವ ಪ್ರಕಾಶನ, ಹಲಸಂಗಿ**

# ಪರಿವಿಡಿ

# ೧. ನನ್ನ ನಲ್ಲ

(ಕುಸುಮದ್ವಿಪದಿ)

“ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ !
ಸುಳಿಯಲಿಲ್ಲ, ಸುಳಿದು ಶೃಂಗಾರವ ಮಾಡಲಿಲ್ಲ !
ತನ್ನೊಳಗೇ ಎನ್ನ ಬಚ್ಚಿಟ್ಟನಲ್ಲಾ॥”

– **ಬಸವಣ್ಣ**

**೧ನೇ ಎಸಳು**

ಏನಮ್ಮ ಪ್ರತಿಭೆ ನೀನೀಸುದಿನವೆಲ್ಲಿದ್ದೆ?
    ಮತ್ತೆ ಹೇಗಿಲ್ಲಿಗೇ ಮರಳಿ ಬಂದೆ ।
ದಾನಮ್ಮ ನೀನೊಲಿಯೆ ಕೊರಡು ಕೊನರುವದೆಂದೆ
    ಬರಡು ಹಯನಾಗಲೂ ಬಲ್ಲುದೆಂದೆ ॥ ೧ ॥

ಹಾಡಬೇಕೆಂದೇಸೊ ದಿನ ಬಯಸಿ ಬೇಡಿದರೆ
    ಒಂದು ನುಡಿಯೂ ಕೂಡ ಮೂಡಲಿಲ್ಲ ।
ಹಾಡಿ ಮುಗಿಸೇನೆಂದರಿಂದು ನುಡಿ ನಿಲ್ಲದಿದೆ
    ನಿನ್ನೊನಪಿನೊಯ್ಯಾರ ತಿಳಿಯದಲ್ಲಾ ॥ ೨ ॥

ಹಿಂದೆ ಬಹುದಿನ ಹಿಂದೆ ನಾನಾಗಿ ಬಂದಿದ್ದೆ
    ನಿನ್ನ ಬಾಗಿಲ ತನಕ ಹಂಬಲಾಗಿ ।
ಅಂದು ನಿನ್ನುಬ್ಬಿನಲಿ ನೀನಿದ್ದಿ ಲೆಕ್ಕಿಸದೆ
    ಇಂದು ನೀನೇ ಬಂದಿ ಯಾತಕಾಗಿ ॥ ೩ ॥

ಈಸು ದಿನಗಳ ಬೆಂಕಿ ಈಗಾರಿತೆಂದಿಲ್ಲಿ
    ಮತ್ತೆ ನೀನಡಿಯಿಟ್ಟೆ ಹೌದೆ ಜಾಣೀ ।
ಲೇಸಿನೊಡನತಿಯು ನೀನು ಹಿಗ್ಗಿ ನಾ ಹಾಲುಂಡು
    ಹೂವಿನಾ ಹಾಸಿಗೆಯ ತುಳಿದ ರಾಣೀ ॥ ೪ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
    ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
    ದೇವದೇವನ ಗೂಢ ವಿಧಿಯ ಕಾಣೋ ॥ ೫ ॥

ಹನ್ನೆರಡು ತುಂಬಿಲ್ಲ ಕನ್ನಕ್ಕಿ ನಾನಂದು
    ನನ್ನ ನಲ್ಲನ ಕತೆಗೆ ಮರಳುಗೊಂಡೆ ।
ಇನ್ನೇನು ಹೇಳುವೆನು ಇಂದಿಗಿಪ್ಪತ್ತಾರು
    ಈಸೊಂದು ದಿನ ಕೊರಗಿ ಗೊತ್ತುಗಂಡೆ ॥ ೬ ॥

ಹದಿನಾಲ್ಕು ವರುಷದಾ ರಾಮರಾ ವನವಾಸ
    ಗರ್ಭಿಣಿಯ ನವಮಾಸ ಮೃತ್ಯುಹಾಸ ।
ಕುದಿಕುದಿದು ಬೇಯುವಾ ಬರಗಾಲದುಪವಾಸ
    ಮರುಗುವಾ ವಿರಹಿಣಿಯ ಊರ್ಧ್ವಶ್ವಾಸ ॥ ೭ ॥

ಜೊತೆಯಿಲ್ಲದೇ ಬೆಳೆಯೆ ಜೊತೆಯಿಲ್ಲದೇ ಉಳಿಯೆ
    ಜೊತೆಯಿಲ್ಲದಾ ಬಾಳು ಗೋಳುಗೋಳು ।
ಜೊತೆಯಿಲ್ಲದಾ ಹೊತ್ತು ನೀಗಲಾರದ ಕುತ್ತು
    ಜೊತೆಯಿಲ್ಲದಿರಲೆಲ್ಲ ಹಾಳು ಬಾಳು ॥ ೮ ॥

ಜೊತೆಯಿಂದಲೇ ಜಗದ ಕುಡಿಯು ಕೊನರುತಲಿಹುದು
    ಜೊತೆಯಿಂದಲೇ ಮಮತೆ ಮೊಳೆಯುತಿಹುದು ।
ಜೊತೆಯಾಶೆ ಜೀವರಿಗೆ ಸೃಷ್ಟಿಸಮ್ಮತವಿಹುದು ।
    ಜೊತೆಯಿಂದಲೇ ಭಾವ ಬೆಳೆಯುತಿಹುದು ॥ ೯ ॥

ಕನ್ನಕ್ಕಿಯಿರುವನಕ ಹೆಸರು ಹೇಳುವ ಹಿಗ್ಗು
    ಕಂಡು ಕಾಣದ ಕತೆಯ ಕೇಳಿ ಹಿಗ್ಗು ।
ಹೊನ್ನ ಶೂಲದ ಹರೆಯ ಹೊಮ್ಮಿ ಹೊರಚೆಲ್ಲಿದರೆ
    ನಲ್ಲನಗಲಿಕೆಯಾಗ ಮನಕೆ ಕುಗ್ಗು ॥ ೧೦ ॥

ಹರೆಯಬಾರದ ಮುನ್ನ ಹಾಗು ಹೀಗೂ ಇದ್ದೆ
ಕರುಳು ಹಸಿಯದ ಮುನ್ನ ಕೆರಳದಿದ್ದೆ ।
ಕರುಣವಿಲ್ಲದ ಬೆಂಕಿ ಕರುಳು ಕೆದರಿತು ಮುಂದೆ
ಮಂಜುಳಿದು ಮಳೆನೀರಿಗಾಶೆಗೈದೆ ॥ ೧೧ ॥

ಬಣ್ಣದಾ ಹಣ್ಣುಗಳ ತಿಂದು ತೇಗಲು ಬಹುದೆ
ಚಿತ್ರದಾ ಮಲ್ಲಿಗೆಯ ಮೂಸಬಹುದೇ ?
ಮಣ್ಣುಗೊಂಬೆಯ ಮೆಚ್ಚಿ ಮಾತನಾಡಿಸಬಹುದೆ
ಹೊಗೆಯ ಹೊಳೆ ಯಾರಾರೆ ಈಸಬಹುದೇ? ॥ ೧೨ ॥

ದೇವರಾಯನ ಹೆಸರನೇಕೆ ಕೇಳಿದೆನಮ್ಮ
ನಾನೇಕೆ ನಂಜು ನುಂಗಿದೆನೆ ತಾಯೀ ।
ಯಾವ ಕಡೆಗೂ ಮಗ್ಗಲೂರಗೊಡದಮ್ಮಯ್ಯ
ಈ ನೋವ ನಾ ತಾಳಲೆಂತೆ ತಾಯೀ ॥ ೧೩ ॥

ಮನೆಹತ್ತಿ ಉರಿದಲ್ಲಿ ದೂರ ಸರಿಯಲು ಬಹುದು
ಮನಹತ್ತಿ ಉರಿದರೆಲ್ಲೋಡಬಹುದೋ ।
ಅನುತಾಪವಿದ್ದಲ್ಲಿ ತಂಪು ತೊಡೆಯಲು ಬಹುದು
ಮನದ ಕಿಚ್ಚಿನ್ನೆಂತು ನೊಂದಬಹುದೋ ॥ ೧೪ ॥

ನನ್ನ ನಲ್ಲನ ನೆನವು ಮನವ ಮುತ್ತಿಕ್ಕಿರಲು
ಹಗಲು ಇರುಳಾಗುವದು ತಾನೆ ಅರಿದೆ ।
ನನ್ನ ರಾಯನ ಚಿಂತೆ ಎವೆಯಿಕ್ಕಗುಡದಿರಲು
ನನಗಾಗ ಇರುಳು ಹಗಲಾಗದಿರದೆ ॥ ೧೫ ॥

ಬೇಯುವೆನು ಬಾರೆಂದೆ ನೋಯುವೆನು ಬಾರೆಂದೆ
ಸಾಯುವೆನು ಸಲುಹಬಾರೆಂದು ಕರೆದೆ ।
ತಾಯಿ ನೀ ಬಾರೆಂದೆ ತಂದೆ ನೀ ಬಾರೆಂದೆ
ಪರದೇಶಿಯನು ಪಾಲಿಸೆಂದು ಮೊರೆದೆ ॥ ೧೬ ॥

ಹಲಬುವೆನು ಬಾರೆಂದು ಹಂಬಲಿಸುತಿಹೆನೆಂದೆ
ಹೊಲಬುಗೆಟ್ಟೆನು ಹೊರಳಿ ದಿಟ್ಟಿಸೆಂದೆ ।
ನೆಲೆಗೆಟ್ಟೆ ಬಾರೆಂದೆ ಬಲಗೆಟ್ಟೆ ಬಾರೆಂದೆ
ಛಲಗೆಟ್ಟೆ ಕುಲಗೆಟ್ಟೆ ರಕ್ಷಿಸೆಂದೆ ॥ ೧೭ ॥

ಮರುಗುವೆನು ಬಾರೆಂದೆ ಸೊರಗುವೆನು ಬಾರೆಂದೆ
ಕೊರಗುವೆನು ಕಾಯಬಾರೆಂದು ಕರೆದೆ ।
ನರಳುವೆನು ಬಾರೆಂದೆ ಹೊರಳುವೆನು ಬಾರೆಂದೆ
ಕೊರಳಾಣೆಯಿಟ್ಟಿಟ್ಟು ಚೆಲ್ಲುವರಿದೆ ॥ ೧೮ ॥

ಕಲ್ಲೆದೆಯ ಕಣಿಯೆಂದೆ ಕೊರಳು ಕೊಯ್ವವನೆಂದೆ
ಕರುಳು ಕರಗದ ಕುಟಿಲ ಕಟುಕನೆಂದೆ
ಸೊಲ್ಲಡಗಿತೇನೆಂದೆ ಛೀ ಸತ್ತೆಯೇನೆಂದೆ
ಬಲ್ಲಂತೆ ಬಾಯ್ಬಿಟ್ಟೆ ಬಯ್ದೆ ಅಂದೆ ॥ ೧೯ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥ ೨೦ ॥

## ೨ನೇ ಎಸಳು

ನೆಲಬಗಿದು ಹುಡುಕುವೆನೆ ಮುಗಿಲೇರಿ ನೋಡುವೆನೆ
ನನ್ನ ಕರುಳಿನ ಕಿಚ್ಚು ಹೇಳಲಾರೆ ।
ಚೆಲುವ ಚೆನ್ನಿಗರಾಯನೆಲ್ಲಿ ಸಿಗಬಹುದಮ್ಮ
ಅವನ ಕಾಣದೆ ಇನ್ನು ತಾಳಲಾರೆ ॥ ೧ ॥

ಯಾವ ದೇಶಾಂತರದೊಳೆಲ್ಲಿ ನಲ್ಲನ ವಾಸ
ಕಂಡವರನ್ನೆಲ್ಲ್ಯಾರೆ ಕಾಣಬಹುದೇ ।
ಯಾವ ಪುಣ್ಯಾತ್ಮರಾ ಕಾಲುಹಿಡಿಯಲೆ ತಾಯಿ
ಹೇಗಾರೆ ದೊರೆಯೆನಗೆ ದೊರೆಯಬಹುದೇ ॥ ೨ ॥

ಯಕ್ಷರಾಕ್ಷಸರಿರಲಿ ಭೂತ ಬೆಂತರವಿರಲಿ
ದೇವಗಂಧರ್ವರ್ಯಾರಾರೆ ಇರಲಿ ।
ಲಕ್ಷಿಸಲಿ ಲಕ್ಷಿಸಲಿ ನನ್ನ ಮೊರೆ ಲಕ್ಷಿಸಲಿ
ರಕ್ಷಕನ ಸುದ್ದಿ ಯಾರಾರೆ ತರಲಿ ॥ ೩ ॥

ಕಣಿಯ ಕೇಳಲೆ ಮತ್ತೆ ಹೊತ್ತಿಗೆಯ ಕೇಳಲೇ
ದಿಗ್ದೇಶ ದೇಶಿಕರ ಕೇಳಲೇನೇ ?
ಗಣತಿಗಳ ಕೇಳಿದರೆ ಗುಣಿಸಿ ಹೇಳ್ಯಾರೇನೇ
ಯಾರ ಮೊರೆ ಹೊಗಲಿನ್ನು ಮಾಡಲೇನೇ ॥ ೪ ॥

ಬರುವನೆಂಬರು ಕೆಲರು ಬಾರನೆಂಬರು ಕೆಲರು
ಅಹುದು ಬಹುದೆಂದು ನರಳುವರು ಕೆಲರು ।
ಅರಿಯೆವೆಂಬರು ಕೆಲರು ಅರಿತೆವೆಂಬರು ಕೆಲರು
ತುಟಿ ಮುಚ್ಚಿ ತಲೆದೂಗುವವರು ಕೆಲರು ॥ ೫ ॥

ಬರುವನೆಂಬರು ಕೆಲರು ಬಾರನೆಂಬರು ಕೆಲರು
ಸತ್ತು ಬಹುದಿನವಾಯಿತೆಂಬರು ಕೆಲರು ।
ಬೆರಗುಬಡುವರು ಕೆಲರು ಬೆರಳು ಮುರಿವರು ಕೆಲರು
ಬಲ್ಲಂತೆ ಬಾಯಿಬಡಿವವರು ಕೆಲರು ॥ ೬ ॥

ಮೇಲೆ ಕೈಮಾಡುವರು ಒಳಗೆ ಕೈತೋರುವರು
ಒಳಹೊರಗು ಬೆರಳ ಸುತ್ತುವರು ಕೆಲರು ।
ಕಾಲುಕೆರೆಯುವ ಕೆಲರು ನೆಲೆವ ಬರೆಯುವ ಕೆಲರು
ಎದೆಗೆ ಕೈಯಿಟ್ಟಿಟ್ಟು ಕುಣಿವ ಕೆಲರು ॥ ೭ ॥

ಗಲ್ಲ ಹಿಡಿಯುವ ಕೆಲರು ಗಲ್ಲ ಹಿಂಡುವ ಕೆಲರು
    ಬೆಸನಿಸುವ ಕೆಲರು ಬೆದರಿಸುವ ಕೆಲರು ।
ಕಲ್ಲುಗೊಳ್ಳುವ ಕೆಲರು ಹಲ್ಲುಕಿಸಿಯುವ ಕೆಲರು
    ಬಲ್ಲವರು ಬಲ್ಲಂತೆ ಬಣಗುತಿಹರು ॥ ೮ ॥

ತಾಳ್ಮೆ ಗಲಿಸುವ ಕೆಲರು ತಪ್ಪು ಹೊರಿಸುವ ಕೆಲರು
    ತಿರುತಿರುಗಿ ತಿವಿತಿವಿದು ಬಯ್ವ ಕೆಲರು ।
ತಾಳು ತಪ್ಪೀ ರೀತಿ ಬೇತಾಳದಂತೆನ್ನ
    ಗಾಳಿಸುವ ಗೋಳಿಸುವ ಖಲರು ಕೆಲರು ॥ ೯ ॥

ಆಶೆ ಹಚ್ಚುವ ಕೆಲರು ಆಶೆ ಹರಿಯುವ ಕೆಲರು
    ಆಶೆ ತೋರಿಸಿ ಅಡ್ಡ ಸೆಳೆವ ಕೆಲರು ।
ಆಸರಾಗುವ ಕೆಲರು ಆಶೆಬುರುಕರು ಕೆಲರು
    ಮುಖ ತಿರುವಿ ಮೂಗು ಮುರಿವವರು ಕೆಲರು ॥ ೧೦ ॥

ಅಣಕವಾಡುವ ಕೆಲರು ಅಣಗಿಸ್ಯಾಡುವ ಕೆಲರು
    ಅನುವು ಹೇಳುವ ಕೆಲರು ಅಳುವ ಕೆಲರು ।
ಕೆಣಕಿ ಕೇಳುವ ಕೆಲರು ಗುಣಿಸಿ ಗುಣುಗುವ ಕೆಲರು
    ಹಣಿಕೆಹಾಕದೆ ಹಾದುಹೋಹ ಕೆಲರು ॥ ೧೧ ॥

ಧೈರ್ಯ ಹೇಳುವ ಕೆಲರು ದಿಕ್ಕುಗೆಡಿಸುವ ಕೆಲರು
    ದಂಗುಬಡಿಸುವ ದಂಭದವರು ಕೆಲರು ।
ಶೌರ್ಯಗಲಿಸುವ ಕೆಲರು ಶಾಂತಗೊಳಿಸುವ ಕೆಲರು
    ಸಾಕು ಬಿಡು ಸುಮ್ಮನಿರು ಎಂಬ ಕೆಲರು ॥ ೧೨ ॥

ಸತ್ತವರ ಮನೆಯಲ್ಲಿ ಸಂತೆ ನೆರೆಯುವ ತೆರದಿ
    ಬಲ್ಲವರು ಬಲ್ಲಂತೆ ರಂಬಿಸುವರು ।
ಸತ್ತವನ ಬದುಕಿಸುವ ಸಾಮರ್ಥ್ಯದವರಾರು
    ಮಾತುಕತೆ ಹೇಳಿ ಮನೆಗೇಳುವವರು ॥ ೧೩ ॥

ಯಾರ ಕೇಳಿದರಿಲ್ಲ ಯಾರು ಹೇಳಿದರಿಲ್ಲ
 ಯಾರ ಬಳಿಯಲಿ ಅತ್ತು ಕರೆದರಿಲ್ಲ ।
ಯಾರಕಡೆಗೇನುಂಟು ಮೀರಿಮಿಕ್ಕಿದ ಮಾತು
 ಯಾರಾರ ಬಳಿಗು ನೆಲೆ ಕಾಣಲಿಲ್ಲ ॥ ೧೪ ॥

ಶಕುನಕ್ಕೆ ಸಿಕ್ಕಿಲ್ಲ ಹೊತ್ತಿಗೆಗೆ ಹೊಳೆದಿಲ್ಲ
 ದಿಗ್ದೇಶ ಯಾತ್ರಿಗಳು ಕಾಣಲಿಲ್ಲ ।
ಅಕಟಕಟ ಗತಿಯೇನು ಮುಂದಿನ್ನು ದಿಕ್ಕೇನು
 ಎಲ್ಲಿ ಮೊರೆಯಿಡಲಿನ್ನು ತಿಳಿಯದಲ್ಲ ॥ ೧೫ ॥

ಹರಣ ಹಾರುವ ರೋಗಿ ಕಂಡಕಸ ತಿನುವಂತೆ
 ಕಂಡಕಂಡವರ ಕಾಲ್ಗೆರಗುವಂತೆ ।
ಮರಣ ಸಂಕಟಬಟ್ಟು ತಿರುತಿರುಗಿ ಬೇಸತ್ತೆ
 ಸಿಕ್ಕವರು ಸಿಕ್ಕದ್ದು ಹೇಳಿದಂತೆ ॥ ೧೬ ॥

ತಿರುಗಿ ಸೊರಗಿದರಿಲ್ಲ ಮರುಗಿ ಮಿಡುಕಿದರಿಲ್ಲ
 ಹುಡುಹುಡುಕಿ ಹೈರಣಿಸಿ ದಣಿದರಿಲ್ಲ ।
ಬೆರಗಾದೆ ಬೆಪ್ಪಾದೆ ಹೊಲ್ಲಾದೆ ಹುಚ್ಚಾದೆ
 ನಲ್ಲನಿಲ್ಲದೆ ಜೀವ ನಿಲ್ಲದಲ್ಲಾ ॥ ೧೭ ॥

ಮಾವು ಬೇವಾಯ್ತೆನಗೆ ಸವಿಯು ಕಹಿಯಾಯ್ತೆನಗೆ
 ಕೂಳು ನೀರೆನಗೆ ನಂಜಾಯ್ತೆ ತಾಯೀ ।
ಜೀವ ಸಾಕಾಯ್ತೆನಗೆ ಸಾವು ಬೇಕಾಯ್ತೆನಗೆ
 ಜಗವು ಕಿಚ್ಚಿನ ಕೊಂಡವಾಯ್ತೆ ತಾಯೀ ॥ ೧೮ ॥

ನನ್ನರಸ ನನ್ನೊಡೆಯ ನನ್ನ ಜೀವದ ಜೀವ
 ನನ್ನ ಮೊರೆಯಿನ್ನಾರು ಕೇಳಬಹುದೊ ।
ನಿನ್ನ ನಂಬಿದ ಬಳ್ಳಿ ನಿನ್ನಾಸರಿಲ್ಲದಿರೆ
 ಭವದಲ್ಲಿ ತಾನೆಂತು ಬಾಳಬಹುದೊ ॥ ೧೯ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
    ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
    ದೇವದೇವನ ಗೂಢ ವಿಧಿಯು ಕಾಣೋ ॥ ೨೦ ॥

## ೩ನೇ ಎಸಳು

ನಿಲ್ಲು ನಿಲ್ಲೆಲೆ ನವಿಲೆ ನಿನ್ನ ಕಣ್ಣುಗಳೇಸು
    ಕಣ್ಣ ಬಣ್ಣಗಳೇಸು ಎಣಿಸಲಾರೆ ।
ಎಲ್ಲ ರೂಪಿಸಿದವನು ಎಲ್ಲಿ ತಾನಡಗಿದನೆ
    ತಾಳಲಾರದು ಜೀವ ಹೇಳಬಾರೆ ॥ ೧ ॥

ಪಿಳುಕಿಸದ ಸಿರಿಗಣ್ಣು ಸುತ್ತು ಚಿನ್ನದ ರೇಖೆ
    ಬೆಳ್ಳಿಮಿರುಗಿನ ಮೈಯ ಕಾಂತಿ ನಿನಗೆ ।
ತಿಳಿಗಂಗೆ ನಿಮ್ಮವ್ವ ಮೀನಮೂರುತಿ ತಿಳಿಸೊ
    ನನ್ನೊಡೆಯನಡಗಿರುವನಾವಕಡೆಗೆ ॥ ೨ ॥

ಆರದಾರತಿ ಹಿಡಿದು ಹಾರುತಿರುವವಳಾರೆ
    ಹೊನ್ನಿ ಏ ಹೊನ್ನಿ ನೀನಾರೆ ಬಾರೆ ।
ಯಾರಿಗಾರತಿ ಒಯ್ವಿ ಹೇಳೆ ನಾನೂ ಬರುವೆ
    ನನ್ನರಸನಿದ್ದಾನು ಅಲ್ಲಿಯಾರೆ ॥ ೩ ॥

ಸಣ್ಣ ದನಿಯವಳಾರೆ ನುಣ್ಣ ದನಿಯವಳಾರೆ
    ಹೆಣ್ಣುದನಿಗೈವ ಕೋಗಿಲೆಯೆ ಬಾರೆ ।
ಕಣ್ಣುತಪ್ಪಿಸಿದವನ ಕುರುಹು ಹೇಳೇ ತಾಯಿ
    ಬನದಮ್ಮ ನೀನಾರೆ ಕರುಣತೋರೆ ॥ ೪ ॥

ಮಾಣಿಕದ ಮೂಗಿನವ ಮೈ ಪಚ್ಚರತ್ನದವ
ಹಣ್ಣು ಕುಕ್ಕುತ ಹಾರುವಣ್ಣ ಬಾರೋ ।
ಜಾಣ ರಂಗಯ್ಯ ತಾ ಕಾಣದಡಗಿದನೆಲ್ಲಿ
ಗಿಣಿರಾಮ ನೀನಾರೆ ಸುದ್ದಿ ಬೀರೊ ॥ ೫ ॥

ಬೆಳದಿಂಗಳಿರುಳಲ್ಲಿ ನಟ್ಟನಡುರಾತ್ರಿಯಲಿ
ಸಪ್ಪಳಿಲ್ಲದ ಗಪ್ಪುಗಾರಿನಲ್ಲಿ ।
ಕೊಳದ ಬಾಂದಳದಲ್ಲಿ ಟಿಂವ್‌ಗುಡುವ ಟೀಂವಕ್ಕಿ
ನೀನಾರೆ ಬಲ್ಲೆಯಾ ನಲ್ಲನೆಲ್ಲಿ ॥ ೬ ॥

ಬಿರುಗಣ್ಣ ಮಲ್ಲಿಗೆಯೆ ಸರಿಯೆ ನಿನಗೀ ಮೌನ
ಕಣ್ಣಿಲ್ಲದವರು ಕಂಡಿಲ್ಲದಿರಲಿ ।
ಸಿರಿವಂತರಾ ಮಗಳು ಸೊರಗಿ ಸಾಯುತಲಿರುವೆ
ಪುರುಷನೆಡೆ ಹೇಳಮ್ಮ ಪುಣ್ಯಬರಲಿ ॥ ೭ ॥

ಬಹುರಸದ ಮೊಲೆಯೂಣಿಸಿ ಜೀವತಣಿಸುವ ತಾಯಿ
ಸರ್ವರಾಧಾರೆ ಭೂದೇವಿ ತಾಯೀ ।
ಬಹಳ ಬೇಡುವಳಲ್ಲ ನನ್ನ ರಾಯನ ಸೊಲ್ಲ
ನೀನಾರೆ ಹೇಳಿಕೊಡಬಾರೆ ತಾಯೀ ॥ ೮ ॥

ಇಲ್ಲಿಯೂ ಮುಗಿಯುವ ಅಲ್ಲಿಯೂ ಮುಗಿಯದವ
ಎಲ್ಲಿಯೂ ಮುಗಿಯದಾಕಾಶ ತಂದೆ ।
ಎಲ್ಲಿ ನನ್ನರಸನಿಹನೆಲ್ಲಿ ನನ್ನಾಶ್ರಯವು
ಕೈಮುಗಿವೆ ಹೇಳೆನ್ನನಂತ ತಂದೆ ॥ ೯ ॥

ಎಂದಿಗೂ ಇದ್ದವನು ಎಂದಿಗೂ ಇರುವವನು
ಜೇಷ್ಠನೇ ಶಾಶ್ವತನೆ ಕಾಲನಟನೆ ।
ಹಿಂದು ಮುಂದರಿಯದಲೆ ಕುಣಿಯುವೆನು ನಿನ್ನೊಡನೆ
ನನ್ನ ರಾಯನ ನೆಲೆಯ ತೋರು ಗಡನೆ ॥ ೧೦ ॥

ಹರಳು–ಮುತ್ತಿನ ರಾಶಿ ಸೆರೆಸೂರೆ ಮುಗಿಲಲ್ಲಿ
ಅಂತರದೊಳೆತ್ತಿ ತೇಲಿಸುವ ಶಕ್ತಿ ।
ಹೊರಳಿ ನೋಡೆನ್ನ ಸ್ಥಿತಿ ಸೂರ್ಯಚಂದ್ರರ ಕಣ್ಣು
ತೆರೆದು ನೋಡೆನ್ನ ಗತಿ ಹೇಳೆ ಯುಕ್ತಿ ॥ ೧೧ ॥

ತೀರ ಸನಿಯೆಂದರೂ ತೀರ ದೂರದೊಳಿರುವಿ
ಸಾವಿರಜ್ಜಿದ ಗಾವುದಂಗಳಾಚೆ ।
ತೋರಿ ನಗೆಬೀರಿ ನೀನೇನು ಹೇಳುವಿ ಚಿಕ್ಕೆ
ಏನೆಂದು ಭಾವಿಸಲಿದೇನು ಸೂಚಿ ? ॥ ೧೨ ॥

ತೊರಲಾರದ ಗಾಳಿ ತಟ್ಟಿ ತಿಳಿಸುವಿಯೇನು
ಯಾವ ನಾಡಿನ ಸೀಮೆ ಸುಳಿದು ಬಂದೆ ?
ಮೀರಿತೆನ್ನಯ ತಾಪ ಅರಿಸೆನ್ನಯ ತಂದೆ
ನನ್ನರಾಯನ ಸುದ್ದಿ ಸಾರು ಇಂದೆ ॥ ೧೩ ॥

ಹಗಲು ನೆರಳಿನ ನಾರಿ ಮುಗಿಲು ಮುಚ್ಚಿದ ನಾರಿ
ಇರುಳಲ್ಲಿ ಕಗ್ಗಕತ್ತಲೆಯ ನಾರಿ ।
ಮಿಗಿಲು ಮಾಟದ ನಾರಿ ತೋರೆ ನಲ್ಲನ ದಾರಿ
ಕಾಳಿ ಕಿಂಕಾಳಿ ನೀ ಮರುಕದೋರಿ ॥ ೧೪ ॥

ನಿದ್ರಿಸುವ ಕತ್ತಲೆಯೆ ಕನಸಿಡುವ ತಿಳಿಬೆಳಕೆ
ಜಾಗ್ರತದ ಕಿಚ್ಚೆ ನೀನಾರೆ ಹೇಳು ।
ನಿದ್ರೆಬಾರದೆ ನಿಂತು ಸೋತು ಸಣ್ಣಾಗಿಹೆನು
ರಾಜರಾಜನ ಠಾವ ತೋರಿಸೇಳು ॥ ೧೫ ॥

ಕಣ್ಣು ಮುಚ್ಚಲು ಮಣ್ಣು ಕಣ್ಣು ಬಿಚ್ಚಲು ಬಣ್ಣ
ಕಣ್ಣಿನಾಚೆಯ ನಿನ್ನ ರೂಪವರಿಯೆ ।
ಹಣ್ಣಾದೆ ಸುಣ್ಣಾದೆ ಸಣ್ಣಾದೆ ಕಳವಳಿಸಿ
ಮರೆತು ಮಲಗಿದ ದೊರೆಯ ತೋರೆ ಸಿರಿಯೆ ॥ ೧೬ ॥

ಕಣ್ಣ ಕಿಂಡಿಯ ಒಳಗೆ ಹಣಿಕೆ ಹಾಕುವ ಜಾಣೆ
    ಒಳಗೆ ಜೀವದ ಬೆನ್ನು ಬಡಿವ ಜಾಣೇ ।
ಕಣ್ಣುಗಾಣದೆ ನಾನು ಕೊರಿ ಸಂಕಟಬಡುವೆ
    ಚೆಲುವ ಚೆನ್ನಗನೆಡೆಯ ತೋರೆ ರಾಣೇ ॥ ೧೭ ॥

ತರುವೆ ನೀ ಹೇಳೆನಗೆ ಮರವೆ ನೀ ಹೇಳೆನಗೆ
    ಕಲ್ಲೆ ಕೊರಡೇ ನೆಲೆಯ ಹೇಳಿರೆನಗೆ ।
ಮೊರೆವ "ಕಾಮಾರ್ತಾಹಿ ಪ್ರಕೃತಿ ಕೃಪಣಾಶ್ಚೇತ–
    ನಾಚೇತನೇಷು" ವೆಂಬಂತೆ ನಿಮಗೆ ॥ ೧೮ ॥

ನನ್ನ ಕಣ್ಣೀರಿನಲಿ ಕಲ್ಲು ಕರಗುತಲಿಹುದು
    ನನ್ನೊಡನೆ ದಿಕ್ಕು ದನಿಗುಡತಲಿಹುದು ।
ನನ್ನ ನಿಟ್ಟುಸಿರಿನಲಿ ಬನವು ಬಾಡುತಲಿಹುದು
    ಕರುಳೆಂಬ ಕರುಳೇಕೆ ಕರಗದಿಹುದು ॥ ೧೯ ॥

ಬರುವದೇನುಂಟೊಮ್ಮೆ ಬರುವಕಾಲಕೆ ಬಹುದು
    ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
    ದೇವದೇವನ ಗೂಢ ವಿಧಿಯು ಕಾಣೋ ॥ ೨೦ ॥

## ೪ನೇ ಎಸಳು

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
    ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
    ನಿಸ್ಸೀಮವೆಂದರೂ ಶೂನ್ಯವಲ್ಲ ॥ ೧ ॥

ಬಂತು ಬಂತೆಲೆ ಬಂತು ಬಂತು ಘನಸಿರಿ ಬಂತು
ಬಂತೆಂದರೂ ಇದ್ದುದಿದ್ದೇ ಇತ್ತು ।
ಬಂತು ಬೆಳಗೆಂಬಂತೆ ಬಂತು ಹೊಳೆ ಬಂದಂತೆ
ಇದ್ದದ್ದೆ ತುಂಬಿ ತುಳುತುಳುಕುತಿತ್ತು ॥ ೨ ॥

ತುಂಬಿಬಂದಿತು ಕಾಂತಿ ತುಂಬಿಬಂದಿತು ಶಾಂತಿ
ತುಂಬಿ ದ್ಯಾವಾಪೃಥಿವಿ ಜೀವ ತುಂಬಿ ।
ತುಂಬಿತುಳುಕಿತು ಪೊಳ್ಳು ತುಂಬಿತುಳುಕಿತು ಜೊಳ್ಳು
ಜಡದೊಡಲ ಜಗಜೀವ ಜ್ಯೋತಿ ತುಂಬಿ ॥ ೩ ॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥ ೪ ॥

ದಣಿದು ಮಲಗಿದ ಗಾಳಿ ಮಿಸುಕಲಾರದ ನಸುಕು
ದಣಿವಾರಿ ಜೀವ ತಣಿದೇಳ್ವ ನಸುಕು ।
ಕುಣಿದಪ್ಪಿ ಮರಬಳ್ಳಿ ಬಿಂಕುಬೀರುವ ನಸುಕು
ಒಳಹೊರಗೆ ಶಾಂತಿ ಸುರಿಸುರಿವ ನಸುಕು ॥ ೫ ॥

ನಿದ್ದೆ ಹರಿಯುವ ಹೊತ್ತು ನಸುಕು ಹರಿಯುವ ಹೊತ್ತು
ರಸವಂತಿ ಹೊಳೆಯಾಗಿ ಹರಿವ ಹೊತ್ತು ।
ಮುದ್ದು ಬೀರುವ ಹೊತ್ತು ಬೇಸರಾರುವ ಹೊತ್ತು
ಬಾಸಿಗದ ಸಿಂಗಾರಿ ಬರುವ ಹೊತ್ತು ॥ ೬ ॥

ನಸುಬಣ್ಣದಾ ನೆಲವು ಕಿಸುಬಣ್ಣದಾ ದಿಕ್ಕು
ನೊರೆಬಣ್ಣ ಮುಗಿಲಸಿರಿಗೇನು ಅಲ್ಲಿ ।
ಹಸಕು ಕಸುಕಿನ ಹಸುರು ಹಣ್ಣಿನಾ ಹೊಸ ಹಳದಿ
ನಸುಕಿನಾ ನೀಲ ಮುಂಜಾವಿನಲ್ಲಿ ॥ ೭ ॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
    ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
    ನಿಸ್ಸೀಮವೆಂದರೂ ಶೂನ್ಯವಲ್ಲ ॥ ೮ ॥

ಬಣ್ಣದಾ ಹಣ್ಣುಗಳ ತಿಂದು ತೇಗಲುಬಹುದು
    ಚಿತ್ರದಾ ಮಲ್ಲಿಗೆಯ ಮೂಸಬಹುದು
ಮಣ್ಣುಗೊಂಬೆಯ ಮೆಚ್ಚಿ ಮಾತನಾಡಿಸಬಹುದು
    ಹೊಗೆಯ ಹೋಳಿ ಈವಾಗ ಈಸಬಹುದು ॥ ೯ ॥

ಮನದ ಮಂದಾರವನು ಮೂಸಲಾರೆವು ನಾವು
    ಕನಸಿನಾ ಕಲ್ಹಾರ ಮೂಸದಿಹೆವೇ ?
ಮನದ ಮಂಜಿನ ಮಡುವ ಕನಸು ಕಲ್ಲಾಗಿಸದೆ
    ಮನಸು ಕನಸಾದಲ್ಲಿ ಮುಸುಕಿನಿರವೇ ? ॥ ೧೦ ॥

ಹಗಲುಗನಸಿನ ಸವಿಯು ಇರುಳುಗನಸಿಗೆ ಬಹುದೆ?
    ಇರುಳಿನದು ಇಲ್ಲದಾ ಸಂತೆ ಕಾಣೋ ।
ನಗುನಗುತಲೂ ಕನಸು ನೋಡನೋಡುತೆ ಕನಸು
    ಬಿಸಿಲಲ್ಲೆ ಬೆಳತಿಗೆಯ ಗುಂತಿ ಕಾಣೋ ॥ ೧೧ ॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
    ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
    ನಿಸ್ಸೀಮವೆಂದರೂ ಶೂನ್ಯವಲ್ಲ ॥ ೧೨ ॥

ಸುತ್ತುಮುತ್ತಲೂ ಸ್ಪರ್ಶ ಒಳಗು ಹೊರಗೂ ಸ್ಪರ್ಶ
    ಕೆಳಗು ಮೇಲೂ ಸ್ಪರ್ಶ ಮಧುರ ಸ್ಪರ್ಶ ।
ಅತ್ತ ಹೊರಳಲು ಸ್ಪರ್ಶ ಇತ್ತ ಹೊರಳಲು ಸ್ಪರ್ಶ
    ಎತ್ತೆತ್ತಲೂ ಸ್ಪರ್ಶ ದಿವ್ಯ ಸ್ಪರ್ಶ ॥ ೧೩ ॥

ಹೇಳಿ ತಿಳಿಯದ  ಸ್ಪರ್ಶ ಕೇಳಿ ತಿಳಿಯದ ಸ್ಪರ್ಶ
ಉಂಡು ಉಸುರುವ ಸ್ಪರ್ಶ ಕಂಡ ಸ್ಪರ್ಶ ।
ಗೋಳಿಡುವ ಜೀವಕ್ಕೆ ಸಂಜೀವನದ ಸ್ಪರ್ಶ
ರಂಜನೆಯ ಕತೆಯಲ್ಲಿ ರೋಮಹರ್ಷ ॥ ೧೪ ॥

ಸಾಲದಾಯಿತು ಚಿತ್ತ ತುಂಬಿ ರಸ  ತುಳುಕಿತ್ತು
ಸಾಕುಸಾಕಾಯಿತ್ತು  ಸ್ಪರ್ಶಪಾನ ।
ತೇಲಿ ನಡೆಯಿತು ಜೀವ ಮೇಲಮೇಲಕೆ ಮತ್ತೆ
ಕೇಳುಕೇಳುತೆ ದಿವ್ಯ ಸ್ಪರ್ಶತಾನ ॥ ೧೫ ॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ !
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥ ೧೬ ॥

ಜೀವದೇಹದೊಳೆಲ್ಲಿ ಮೈಬಗೆದು ನೋಡಿದರೆ
ಅಲ್ಲೇನು ಅಸ್ಥಿಮಾಂಸಗಳ ಗೂಡು ।
ದೇವಜಗದೊಳಗೆಲ್ಲಿ ಮುಗಿಲೇರಿ ನೋಡಿದರೆ
ಅಲ್ಲೇನು ಗ್ರಹತಾರಕೆಗಳ ಬೀಡು ॥ ೧೭ ॥

ಜಗದ ಜೀವವೆ ದೇವ ಜಗವೆ ದೇವನ ದೇಹ
ಜೀವವಿರದಲ್ಲಿ ಜೀವನದ ಸೆಲೆಯೇ ?
ಜಗದಾತ್ಮ ಜಗದೀಶ ಆತ್ಮಗಳ ಮೂಲಾತ್ಮ
ಪರಮಾತ್ಮ ನಿನಗೊಂದು ಬೇರೆ ನೆಲೆಯೇ ? ॥ ೧೮ ॥

ನಿಶ್ಶಬ್ದ ನಿಶ್ಶಬ್ದ ಶಬ್ದದಾಚೆಯ ಶಬ್ದ
ನಿಶ್ಶಬ್ದವಿದ್ದರೂ ಮೌನವಲ್ಲ ।
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ ॥ ೧೯ ॥

ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು
ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥ ೨೦ ॥

**೫ನೇ ಎಸಳು**

ತಂದೆ ನೀ ಕಣ್ತೆರೆದರಂದಿಗರುಣೋದಯವು
ಮುಂದೆ ಸೂರ್ಯೋದಯದ ಚಿಂತೆಯಿಲ್ಲ ।
ಹಿಂದೆ ಕತ್ತಲೆಯಲ್ಲಿ ಕಂಗೆಟ್ಟು ಕೊರಗಿದೆನು
ಇಂದೊಳಗು ಹೊರಗು ಬೆಳಗಾಯಿತಲ್ಲ ॥ ೧ ॥

ಈಸುದಿನ ಕಂಡಿದ್ದೆ ಬಾಗಿಲಿಲ್ಲದ ಕೋಟೆ
ಇಂದು ಬಾಗಿಲುಕೋಟೆಯಾಯಿತಲ್ಲ ।
ಈಸೀಸಿ ದಣಿದಣಿದು ಕೊನೆಗೆ ದಂಡೆಯ ಕಂಡೆ
ಇಂತು ದೇವನ ರಾಜ್ಯ ಲಭಿಸಿತಲ್ಲ ॥ ೨ ॥

ತಲೆಯ ಮೇಲಿನ ಗುಡ್ಡ ತೆಳಗೆ ತಾನಿಳಿಯಿತ್ತು
ಕಂಗೆಡಿಸುವಾ ಕಾಡು ಕಿತ್ತಿತಯ್ಯಾ ।
ಬಲುದಿನದ ಕಾಲ್ತೊಡಕು ಕಳಚಿ ಹೋಯಿತ್ತಯ್ಯ
ಹರಸಿದಾ ಹರಕೆ ಕೈಗೂಡಿತಯ್ಯಾ ॥ ೩ ॥

ಉರಿವ ಕಿಚ್ಚಿನ ಕೊಂಡ ಹರಿವ ಹೊಳೆಯಾಯಿತ್ತು
ಕೊರೆವ ಕರಗಸ ಕೊರಳಸರವಾಯಿತು ।
ಪರಿಪರಿಯ ಬಸುರ ಬೇನೆಯ ತಾಪತಡಿಯೆಲ್ಲ
ಹಡೆವ ಹಿರಿಹಿಗ್ಗಿನಲಿ ಮರವಾಯಿತು ॥ ೪ ॥

ನಟ್ಟ ಮುಳ್ಳಿಂತೊಮ್ಮೆ ಕಿತ್ತಿ ಹೋಯಿತ್ತಯ್ಯ
ಪಟ್ಟ ಪರಿಪರಿ ಕಷ್ಟ ಫಲಿಸಿತಯ್ಯ ।
ಬೆಟ್ಟಕ್ಕೆ ಕಲ್ಲು ಹೊತ್ತಂತಿತ್ತು ಬಾಳುವೆಯು
ಕೊರಡಿನೊಳೆ ಕೊನರು ಫಲ ಫಲಿಸಿತಯ್ಯ ॥ ೫ ॥

ಜೀವದಲ್ಲೆನಿಸಿದ್ದು ಬುದ್ಧಿಗೊಡಮೂಡಿದ್ದೆ
    ಭಾವಯೋಗದ ಸಿದ್ಧಿ ಬೇರೆಯಿಹುದೇ ?
ಮಾವುತನ ಗೋಚರಣೆ ಮದಗಜನ ಆಚರಣೆ
    ಮೇಳವಿಸದಿರೆ ಗೊತ್ತುಗಾಣಬಹುದೆ ? ॥ ೬ ॥

ಮನವು ಕುಣಿದೇನು ಫಲ ತನುವು ನೆಲಹಿಡಿದಿರಲು
    ಹೋಗಬೇಕೆಂದಲ್ಲಿ ಹೋಗಬಹುದೇ ?
ಅನಿಸಿಕೆಗೆ ಫಲವುಂಟೆ ಎಣಿಕೆಗೊಪ್ಪುವ ತನಕ
    ಸಾಗಬೇಕೆಂದಂತೆ ಸಾಗಬಹುದೇ ? ॥ ೭ ॥

ಒಲವು ತಾನೊಂದು ಕಡೆ ಓಟವಿನ್ನೊಂದು ಕಡೆ
    ನೋಟವೆಲ್ಲಾ ಬಿಟ್ಟು ಬೇರೆ ಕಡೆಗೆ ।
ಗೆಲವು ತಾನೆಲ್ಲಿಯದೊ ನೆಲೆಯೆ ಹತ್ತದ ಬಳಿಕ
    ಪ್ರಾಣಸಂಕವೊಂದೆ ಕಟ್ಟಕಡೆಗೆ ॥ ೮ ॥

ಒಂದು ಕಾಲೊಂದು ಕಡೆಗಿನ್ನೊಂದು ಬೇರೆ ಕಡೆ–
    ಗಿಂಥ ಪರಿಯಲಿ ಹೆಜ್ಜೆ ಹಾಕಬಹುದೇ?
ಒಂದಾಗಿ ಭಾವಬುದ್ಧಿಗಳು ಮುಂದರಿವನಕ
    ಜೀವನಕೆ ಜೀವ ಜೀವಾಳವಿಹುದೇ? ॥ ೯ ॥

ಅನಿಸಿದನಿಸಿಕೆಯನ್ನೆ ದಿಟವೆಂದು ನಂಬುವರೆ
    ಅನಿಸಿಕೆಯ ತಳಹದಿಯೆ ಗಟ್ಟಿಯಿಲ್ಲ ।
ಮನದ ಮನನದ ಸೂಕ್ಷ್ಮ ಸಂಸ್ಕಾರದನಿಸಿಕೆಯು
    ಮನನಕ್ಕೆ ಸತ್ಯದಾ ಭೆಟ್ಟಿಯಿಲ್ಲ ॥ ೧೦ ॥

ಸತ್ಯವೋ ಮಿಥ್ಯವೋ ಯಾವದೂ ಅರಿಯದಲೆ
    ಕೇಳಿಕೆಯ ನೆರೆನಂಬಿ ನೆನೆಯುತಿರಲು ।
ಸತ್ಯವೆಂದೆನಿಸುವದು ಸತ್ಯವಲ್ಲದ ಮಾತು
    ಶ್ರದ್ಧೆಯಾ ಸತ್ಯಕ್ಕೆ ಇಷ್ಟೆ ಹುರುಳು ॥ ೧೧ ॥

ತರ್ಕಿಸಿದ ಕಲ್ಪನೆಯ ದಿಟವೆಂದು ನಂಬುವರೆ
ತರ್ಕಕ್ಕೆ ನಿಷ್ಠೆಯಾ ನೆಲೆಯೆ ಇಲ್ಲ ।
ತರ್ಕಕ್ಕೆ ಹೊಸತರ್ಕ ಹೊಡದೋಡಿಸುವದಯ್ಯ
ತರ್ಕದಾ ಸತ್ಯಕ್ಕೆ ಮೋರೆಯಿಲ್ಲ ॥ ೧೨ ॥

ಭಾವಬುದ್ಧಿಗಳೆರಡೆ ತಿಳುವಳಿಕೆಗಾಧಾರ
ಭಾವಕ್ಕೆ ಬುದ್ಧಿಯೇ ಬಾಹ್ಯ ನೇತ್ರ ।
ಭಾವಕೊಲಿಯದ ಬುದ್ಧಿ ಬುದ್ಧಿಗೊಲಿಯದ ಭಾವ
ಇಲ್ಲೆ ಕಾಣಯ್ಯ ಸಂದೇಹ ಸೂತ್ರ ॥ ೧೩ ॥

ಯುಕ್ತಿಗದು ಯುಕ್ತವೆಂದೆನಿಸಿದ್ದೆ ಅನಿಸಿಕೆಯು
ಅನಿಸಿಕೆಗೆ ಯುಕ್ತವಾದದ್ದೆ ಯುಕ್ತಿ ।
ಶಕ್ತಿಯಿಲ್ಲೆರಡರೊಳಗೊಂದು ಬಿಟ್ಟೊಂದಕ್ಕೆ
ನೆರೆತು ಬೆರೆತಲ್ಲೆ ಜೀವನದ ಶಕ್ತಿ ॥ ೧೪ ॥

ಬೀಜದಿಂದಲೆ ಬಳ್ಳಿ ಬಳ್ಳಿಯಿಂದಲೆ ಬೀಜ
ಭಾವಬುದ್ಧಿಗಳ ಪರಿಯಿಂಥದಯ್ಯ ।
ಸೋಜಿಗದ ಮಾತೇನು? "ತಿಳಿಯುವುದು ತೀರುತಲೆ
ತಿಳಿವು ಮೈದಾಳುವದು" ಸತ್ಯವಯ್ಯಾ ॥ ೧೫ ॥

ಬಗೆಬಗೆಯ ಘಟನೆಗಳನೊಂದೊಂದೆ ನಿಶ್ಚಯಿಸಿ
ಒಂದೊಂದಕೊಂದೊಂದು ಅರ್ಥಯಿಸುತಾ ।
ಜಗದ ನಿಚ್ಚಣಿಕೆಯನು ತತ್ತರಿಸುತೇರುವೆವು
ಒಂದರಿಂದೆತ್ತಿ ಅಡಿಯೊಂದಕಿಡುತ ॥ ೧೬ ॥

ಅನಿಸಿಕೆಯ ಮರ್ಯಾದೆ ಗುಣಿಸುತ್ತ ಸಾಗುವುದೆ
ಅನುಭವದ ಅಧ್ಯಾತ್ಮಯೋಗವಯ್ಯಾ ।
ಎಣಿಸಿಕೆಯ ಹರಿಗಡಿದು ಅನಿಸಿಕೆಯ ಝರಿಯೊಡೆದು
ಶಾಂತಿಯೊಡಮೂಡಿದ್ದೆ ಸಿದ್ಧಿಯಯ್ಯಾ ॥ ೧೭ ॥

ಬುದ್ಧಿಭಾವದ ಸೀಮೆ ಇಲ್ಲಿಗಾಯಿತ್ತಯ್ಯ
ಮುಂದೆ ದೇವನ ದಿವ್ಯ ರಾಜ್ಯವಯ್ಯಾ ।
ಇದ್ದಷ್ಟು ಹಮ್ಮೆಲ್ಲ ಹಣ್ಣುಹಣ್ಣಾಗುತಲೆ
ಕೈಮುಗಿದು ಶರಣು ಶರಣೆಂಬುದಯ್ಯಾ ॥ ೧೮ ॥

"ಬುದ್ಧಿಯೇ ಬಾಧಕವು ಬುದ್ಧಿಯೇ ಸಾಧಕವು"
ಬುದ್ಧಿಯೇ ಮಾನವನ ಭಿತ್ತಿಯಯ್ಯಾ ।
ಬುದ್ಧಿಯಿಂದಲೆ ಭಾವ ಬೀಳುತೇಳುತ ಸಾಗಿ
ನಿಷ್ಠೆ ನಿಬ್ಬೆರಗಾಗಿ ನಿಲುವದಯ್ಯಾ ॥ ೧೯ ॥

"ಆದಿಯಾಧಾರ ಘನಘನವೇಧಿಸುವುದೆ ಮನ
ಮನವು ಮಹದಲ್ಲಿ ನಿಂತದ್ದೆ ಭಕ್ತಿ" ।
ಓದುವಾದಗಳೆಲ್ಲ ಶಕ್ತಿಯುಕ್ತಿಗಳೆಲ್ಲ
ಮುಗಿದು ನಿಜನಿಂತದ್ದೆ ಭಾವಮುಕ್ತಿ ॥ ೨೦ ॥

ಬರುವದೇನುಂಟೊಮ್ಮೆ ಬರುವಕಾಲಕೆ ಬಹುದು
ಬಯಕೆ ಬರುವದರ ಕಣ್ಸನ್ನೆ ಕಾಣೋ ।
ಅರಿಯದಾ ಹವಣಿಕೆಯು ಜೀವಜೀವನ ಲೀಲೆ
ದೇವದೇವನ ಗೂಢ ವಿಧಿಯು ಕಾಣೋ ॥ ೧೦೧ ॥

## ಕೊನೆಯ ನುಡಿ

"ಮೊಲೆಯ ಮೇಲಿರ್ದ ಯೋಗಿಗಳುಂಟು ಲೋಕದಲಿ
ಶಿಲೆಯ ಮೇಲಿರುತಿರುವ ಮೋಹಿಯುಂಟು" ।
"ಬಳಸಿದಾ ಬ್ರಹ್ಮಾಚಾರಿತ್ವ ಉಂಡುಪವಾಸ"
ನಮಗಿದೇ ಇಂದು ಬೇಕಾದ ಗಂಟು ॥

ಓಂ ಶಾನ್ತಿಃ ಶಾನ್ತಿಃ ಶಾನ್ತಿಃ

-----

## ೨. ಶಾರದೆಗೆ

ಮೂಡಲದ ಮಾನವರ ಜೀವನದ ಝರಿಯಾಗಿ
ನಾಡೆ ಪಡುವಲರಾದಿ ನಾದವೇದವನೂದಿ
ಮೂಡಪಡುವಲ ನಡುವೇ ಮಂಡಿಸಿದ ಮಾದೇವಿ
ಶ್ರೀ ಸರಸ್ವತಿಯೆ ಶರಣು ॥ ೧ ॥
ನಗೆಯ ನೊರೆಯಲಿ ಹಗಲ ಹೆಣೆದು ಹೊತ್ತಿಹ ಹೊಳಹೆ
ಮುಗಿಲಲ್ಲಿ ಮುತ್ತುಗಳ ಮೂಡಿಸುವ ಮಂತ್ರವೆ
ಜಗಕೆ ಕಣ್ಗಳ ಕೊಟ್ಟ ಕಲನಾದ ಕೌಮುದಿಯೆ
ಶಾರದೆಯೆ ಶರಣು ಶರಣು ॥ ೨ ॥
ಭಾವವೀಣೆಯ ಮೇಲೆ ಬೆರಲೆಳೆಯುತೆಳೆಯುತಲೆ
ಧಾವಿಸುವದುಲಿವು ತಾನಲೆಗೊಂಡು ಬಾಂದಳಕೆ
ಭಾವಿಸುತ್ತಲೆ ಬಯಲ ಬಣ್ಣಿಸುವ ಬಲುಹುಳ್ಳ
ಭಾರತಿಯೆ ಶರಣು ಶರಣು ॥ ೩ ॥
ಬೆಳದಿಂಗಳನು ಬೆಳಗಿ ಬಿಳುಪುಗೊಳಿಸುವ ಬೆಳಕೆ
ಎಳೆಬಿಸಿಲಿಗೊಪ್ಪಿಡುವ ಹೊಳೆವ ತಿಳಿಗಣ್ದೆರೆಯೆ
ತುಳುಕುವೆಣ್ದೆಶೆಗಳಲಿ ನೆಲಮುಗಿಲ ತೇಲಿಸುವ
ರಸವತಿಯೆ ಶರಣು ಶರಣು ॥ ೪ ॥
ನಾಲ್ಮೊಗನ ನಲ್ಲೆಯೆಂಬೀ ಮೇಲ್ಮೆ ಸಲ್ವುದೇ
ಚೆಲ್ವುಗಾರ್ತಿಯೆ ನಿನ್ನ ಚೆಲುವ ಚಿಮುಕಿಸಿ ಚೆಲ್ಲಿ
ಒಲ್ಮೆಯಲಿ ಪುರುಳಪುಟ್ಟಿಸಿ ಪುಟಿವ ನಾಲ್ಮೊಗದ
ನುಡಿವೆಣ್ಣೆ ಶರಣು ಶರಣು ॥ ೫ ॥
ನಿನ್ನ ನಾಲಿಗೆಯಲ್ಲಿ ನೆಲೆಗೊಂಡ ನಲ್ನೆಯ್ಯ
(ನೀನಿಟ್ಟ ನನೆಗೊನೆಯ ತೆರೆ ಬಾಯ್ದೆರೆಯ ಮುತ್ತಿ)
ತಾನುಂಡು ಸವಿಸೂಸಿ ಮೊರೆವ ಕವಿ ಮಧುಕರನ
ತಾಯೆ ಚಿತ್ಕಾಯೆ ಶರಣು ॥ ೬ ॥

———

## ೩. ಶಿವಶರಣರ ಸವಿನುಡಿಗಳು

ಮರದೊಳಗೆ ಬೆಂಕಿಯನು । ಉರಿಯದಂತಿರಿಸಿದಯ್
ಬಿತ್ತಿನೊಳು ಗಿಡವನ್ನು । ಗೊತ್ತಾಗದಂತಿಟ್ಟೆ
ಸೊಂಪಿನಾ ತುಪ್ಪವನು । ಕಂಪಿಲ್ಲದಂದದಿಂ
ನೊರೆವಾಲೊಳಿರಿಸಿರುವ । ದೊರೆಯೆ । ದೊರೆ ನೀನಾರು ?

ಜಿಗಿವ ಮಿಂಚಿನ ಬಳ್ಳಿ । ಮುಗಿಲ ಮರೆಗಿರುವಂತೆ
ಹೊಳೆವ ಕಂಗಳ ಮರೆಗೆ । ಬೆಳಕು ತಾನಿರುವಂತೆ
ಇಲಿದೇರನಯ್ಯನಾ । ನಿಲವು ತಾನಿರ್ಪುದೈ

ಹೊಲೆಯರಾ ಬಾವಿಯೊಳು । ಎಲುವೊಂದು ನಟ್ಟಿರಲು
ಹೊಲೆಯೆನುವದೀ ಜಗವು । ಹಲವೆಲುವಿನಿಂದಾದ
ಮೆಲುವಂಥ ಬಾಯಿಂದೆ । ಬಲು ಸಟೆಯ ನುಡಿಯಲದು
ಹೊಲೆಯರಾ ಬಾವಿಯಿಂ । ಬಲು ಕೀಳು ತಾನಲ್ಲೆ ?

ಉರಿಯೊಳಿಹ ಕಪ್ಪುರಕೆ । ಕರಿಯುಂಟೆ ? ಮೃಗಜಲಕೆ
ಕೆಸರುಂಟೆ ? ಗಾಳಿಯೊಳು । ಪಸರಿಸಿದ ಪರಿಮಲಕೆ
ನೈರ್ಮಲ್ಯವುಂಟೇನೊ ? । ನಿಮ್ಮಡಿಯೊಳಿಂಬಾದ
ಕಲಿಗೆ ಭವವುಂಟೆ ? ಕೂ । ಡಲ ಸಂಗಮೇಶ್ವರಾ

______

## ೪. ಧ್ರುವ

"ಬಾರವ್ವ ಜಾಣಿ । ರಂಗಪೋಗಿ । ತಿಂಗಳಾಯಿತೆ" ಎಂಬಂತೆ

ಸುನೀತಿದೇವಿ । ನಿದ್ದೆ ತಿಳಿದು ಎದ್ದು ಕುಳಿತಳು ।
ಸುನೀತಿದೇವಿ । ನಿದ್ದೆ ತಿಳಿದು ಎದ್ದು ಕುಳಿತಳು ॥ ಪಲ್ಲವಿ ॥

ಎದ್ದು ಕುಳಿತು ಹೊದ್ದ ಸೆರಗ
ಸರಿಸಿ ಮುದ್ದು ಮಗನ ಕಡೆಗೆ
ಕೈಯ ಚಾಚಿ ಕಾಣದಾದಳು
ಮಗನ ಕಡೆಗೆ–
ಕೈಯ ಚಾಚಿ ಕಾಣದಾದಳು ॥ ೧

ತರಳ ನಿದ್ದೆಗಣ್ಣಿನಲ್ಲಿ
ಉರುಳಿ ಮುಂದೆ ಹೋದನೆಂದು
ತಿಳಿದು ಸರಿದು ಸರಿದು ನೋಳ್ಪಳು
ನೆಲಕೆ ಕೈಯ–
ಸವರಿ ಮಗನ ಕಾಣದಾದಳು ॥ ೨

ಏಳುಬೀಳುತೆದ್ದು ದೀಪ
ಹಚ್ಚಿ ನಾಲ್ಕು ಮೂಲೆ ನೋಡಿ
ಮಗನ ಮೋರೆ ನೋಡದಾದಳು
ಹುಡುಕಿ ಹುಡುಕಿ–
ಮಗನ ಮೊಗವ ಕಾಣದಾದಳು ॥ ೩

ಕಣ್ಣು ತುಂಬ ನೀರು ತಂದು
ಕೊರಲ ಸೆರೆಯ ಉಬ್ಬಿಬರಲು

ಹೊರಟು ಮೂಕಳಂತೆ ನಡೆದಳು
ಸುನೀತಿ ಎದ್ದು–
ಮನೆಯ ಬಿಟ್ಟು ಹೊರಗೆ ನಡೆದಳು ॥ ೪

ತೋಟಪಟ್ಟಿ ಹಳ್ಳಕೊಳ್ಳ
ಬಾವಿಕೆರೆಗಳ್ಲಿ ನೋಡಿ
ಕೇರಿಕೇರಿ ತಿರುಗಿ ನೋಳ್ಪಳು
ಹಿಂದಕೊಮ್ಮೆ–
ಮುಂದಕೊಮ್ಮೆ ಹೊರಳಿ ನೋಳ್ಪಳು ॥ ೫

"ಅಲ್ಲಿ ಇರುವನೇನೋ ತರಳ ?
ಇಲ್ಲಿ ಇರುವನೇನೋ ಕಂದ ?"
ಎಂದು ಮುಂದುಮುಂದೆ ಹೊರಟಳು
"ಬಿಸಿಲುಗುದುರೆ–
ಹಿಂದೆ ಚಿಗರಿಯಂತೆ" ನಡೆದಳು ॥ ೬

ಮುಂದೆ ಹೋಗಿ ಮತ್ತೆ ಮನಸಿ
ನಲ್ಲಿ "ಮಗನು ಮನೆಗೆ ಹೋಗಿ
ಮಲಗುಕೊಂಡನೇನೊ !" ಎಂದಳು
ಜೋಕಾಲಿಯಂತೆ–
ತೂಗಲಾಡಿ ಬಾಲೆ ದಣಿದಳು ॥ ೭

"ಸಣ್ಣ ಕೂಸು ಐದು ವರ್ಷ
ತುಂಬಲಿಲ್ಲ ಇನ್ನು ತನಕ
ಎನ್ನ ಕೂಸು ಎಲ್ಲಿ ಹೋಯಿತು ?
ಸಣ್ಣ ಗಿಣಿಯು–
ಕತ್ತಲಲ್ಲಿ ಎತ್ತ ಹಾರಿತು ? ೮

ದೇವರೆನಗೆ ರೆಕ್ಕೆಗಳನು
ಡೇಗೆಯಂಥ ಕಣ್ಣುಗಳನು
ಯೋಗಿಯಂಥ ಮನವ ಕೊಡುವನೇ ?
ಕೊಟ್ಟರೀಗ–
ಮುಗಿಲನೇರಿ ನೋಡಿ ಬರುವೆನೇ । ೯

ಎಂದು ಹಲುಬಿ ಹಂಬಲಿಸುವ
ತಾಯಿ ಜೋಲುಮೋರೆ ಹಾಕಿ
ಹುಚ್ಚಳಂತೆ ಕುಳಿತುಬಿಟ್ಟಳು
ಮಂದಿ ಮಕ್ಕ–
ಳಳುವ ಕೇಳಿ ಕಣ್ಣು ತೆರೆದಳು ॥ ೧೦

ಗಿಡವೆ ಧ್ರುವನು, ದನವೆ ಧ್ರುವನು
ಕಲ್ಲೆ ಧ್ರುವನು. ಸೊಲ್ಲೆ ಧ್ರುವನು
ಎಲ್ಲ ಕಡೆಗೆ ಧ್ರುವನ ಭ್ರಾಂತಿಯೇ
ಸುನೀತಿಯಲ್ಲಿ–
ಮೂಡಿತಿಂದು ಧ್ರುವನ ಮೂರ್ತಿಯೇ ॥ ೧೧

———————

## ೫. ಮೌನ ಕೋಕಿಲಗೆ

ನಾದಲೋಲುಪನರಸಿ ! ನಲ್ನಾಡ ರಾಣೀ !
ನಾದ ಮಾಧುರ್ಯವನು ನೀನೀಡೆ ಜಾಣೀ !
ಕಾದು ಕೈಮುಗಿದು ನಿರ್ಜರರು ನಿಂತಿಹರು
ನಾದವೇದವನೋದಿ ತಣಿಸವ್ವ ! ಉಸುರು !!
ನಿನ್ನ ಹಾಡಿನ ಕೊಡೆಯ ನೆರಳಲ್ಲಿ ಬೆಳೆದು
ನನ್ನಿಗರೆದೀ ವಸುಂಧರೆಯಿಂದು ಮುಳಿದು !!
ಹುಡಿಯೆದ್ದು ಹಾರವಳು ಪುಡಿಯಾಗಿ ಕಾಯ್ದು
ಹಿಡಿದದ್ದಿ ನಾದರಸದಲಿ ನಾದು–ನಾದು
ನೆಲವನೊಲಿಸುವ ನಾದ–ವೇದ–ಮಂತ್ರವನು
ನಲಿದೋದಿ ನಲ್ಲೆ । ನೀನೆಲಿಸು ನಲ್ಮೆಯನು !

* * *

ನಾದವೇರುತ್ತೇರುತುಚ್ಚಗತಿಗ್ಹೋಗಿ
ನಾದರಾಜ್ಯದ ಮೇರೆಯನು ಮೀರಿ ಸಾಗಿ
ಮಾನವನ ಶ್ರವಣಶಕ್ತಿಯ ಮೀರಿ ಹಾರಿ
ಮೌನ–ಸಾಮ್ರಾಜ್ಯ–ಸಿಂಹಾಸನವನೇರಿ
ತಾನೆತಾನಾಗಿ ತಾಂಡವ ಮೂರ್ತಿಯಾಗಿ
ಗಾನ ಗಾಂಭೀರ್ಯದಲಿ 'ತಲ್ಲೀನ'ವಾಗಿ
ಆವ ಸಂದೇಶವನು ಸೂರೆಮಾಡಿದರೂ
ಈ ವಸುಂಧರೆಯೊಳೇ ಹರಿಯಹತ್ತಿದರೂ
ಮಾನವನಿಗದು ಮೌನವಾಗಿ ತೋರುವದು
ಮೌನಿ–ಮುನಿಯಾದವಗೆ ಮಾತ್ರ ತೋಚುವದು

* * *

ಸಾಕಾರ ಸಾನ್ನಿಧ್ಯದಲಿ ಸಾಲೆಗಲಿತು
ಆಕಾರದಣ ನಿರಾಕಾರವನು ಕುರಿತು
ಬೇಕಾದ ಹಾಗಲ್ಲಿ ಬಯಲಾಟ ಆಡಿ
'ನಾಕ'–'ಲೋಕ'ಗಳೆಂಬ ಭೇದವೀಡಾಡಿ
ಮರವಿನಲಿ ಮರೆಯಾದುದನು ಕಾಣಲಹುದು

ಅರವಿನಿಂದಗಲಾಗಿ ತೆರೆ ತೆರೆಯಬಹುದು
ಮೌನಸಪ್ತಕದಿಂದ ನಾದವನ್ನಿಳಿಸಿ
ನೀನೀಂದು ತಾರ–ಮಂದ್ರಾದಿಗಳ ಬಳಸಿ
'ಪಂಚಮದ' ಪರಿಯ ನಮಗಿಂದು ! ! ಆ ಬಳಿಕೆ
ಇಂಚರವನೇರಿಸುತೆ ನಡೆ ನಿನ್ನ ಸ್ಥಳಕೆ

* * *

ಮೌನ ಮೋಹನ ಮಂತ್ರ ಮೂಲೆಯರ್ಥವನು
ಏನು ಅರಿಯದ ನಾನು ಹೇಗೆ ಭಾವಿಪೆನು?
ಕೊರಳನೆತ್ತರಿಸೇನು ಹೇಳಬೇಕೆನುವೆ ! ! !
ಗರಿಗಳನು ಸರಿಸರಿಸಿ ಏನು ಸೂಚಿಸುವೆ ? ?
"ಶಬ್ದದಾಚೆಗೆ ಭಾವರಾಜ್ಯವಿಹುದೆಂ"ದೋ ?
"ಶಾಬ್ದಿಕರು ಭರದಿ ಭಾವಿಕರಾಗಲೆಂ"ದೋ ? ?
ಮುನಿಸೆಂದು ಮುನಿವ ಮನುವಿನ ಮಗನು ತಾನು
ಮುನಿಯೊಬ್ಬನರಿವನೀ ಮೌನ–ಭಾಷೆಯನು
ಕೂಗು ಕೋಕಿಲೆ ! ಕೂಗು–ಕೂಗಿ ಗಪ್ಪಾಗು
ಕುಗಿ ಹೇಳಿನ್ನೊಮ್ಮೆ–"ಆಗು ಮುನಿಯಾಗು"

* * *

ನಿನ್ನ ಪಂಚಮದಿಂಚರದ ಸರಿಯು ಹರಿದು
ನನ್ನ ಕಿವಿಯೊಳಹೊಕ್ಕು ಬಗೆಯನ್ನೆ ಬಗೆದು
ತಿಳಿಗೊಳದೊಳಿಳಿದಾತ್ಮಭಾವದಲಿ ಬಳೆಯೆ
ಇಳೆಯೆಲ್ಲ ನಾದ–ಸಂಶೋಭೆಯನೆ ತಳೆಯೆ
ನಿನ್ನ ಸಂದೇಶವನು ಜಗವು ತಿಳಿದೀತು ! !
ನಿನ್ನ ಮೌನವೆ ವಿಶ್ವವನು ವ್ಯಾಪಿಸೀತು ! ! !

* * *

ನಿರ್ಜರಾಂಗನೆ ! ನಿನ್ನ ನಾದವನು ಸುರಿಸಿ
ನಿರ್ಜೀವಕೋಟಿಯಲಿ ಜೀವವನು ಹರಿಸಿ
ಕೂಗು ಕೂಗೆಲೆ ಕೂಗು ! ಕೋಗಿಲೆಯೆ ! ಕೂಗು ! !
ಕೂಗು ಜಗದೊಡನಾಡಿಯಾಗಿ ನೀ ಸಾಗು ! !
ಆಗ ಜಗದಲಿ ಮೌನಭಾಷೆ ಮೂಡೀತು ! !
ಆಗ ಮನುವಂಶ ಮುನಿವಂಶವಾದೀತು ! ! !

* * *

ನಾದಲೋಲುಪನರಸಿ ! ನಲ್ನಾಡ ರಾಣೀ !
ನಾದ ಮಾಧುರ್ಯವನು ನೀನೀಡೆ ಜಾಣೀ

## ೬. ಸಲಿಗೆಯ ಸಲ್ಲಾಪ

ಎಲ್ಲೆಲ್ಲಿರುವೆಯೊ ಅಲ್ಲಲ್ಲೆಲ್ಲಾ ನಿನ್ನನು ಕಂಡೇನು !
ಇಲ್ಲಿಯ ಬಿಟ್ಟೆನ್ನೆಲ್ಲಿಯೊ ಹೋದರೆ ಅಲ್ಲೇನುಂಡೇನು ೧

ವನದಲ್ಲಿದ್ದವ ಮನೆಯಲ್ಲಿಲ್ಲವೆ ? ವನಚರನೇ ನೀನು
ಮನೆಯಲ್ಲಿದ್ದರೆ ಮತ್ತೇತಕೆ ತಡ ಬೈಲಿಗೆ ಬಾ ನೀನು ೨

ಸಾಧನೆಯಿಂದಲೆ ಸಾಧಿಸಿಕೊಳ್ಳಲು ಬೇತಾಳವೆ ನೀನು
ಹಾದರದವನಿಗೆ ಹುಟ್ಟಿದೆನೇನೋ ? ನಿನ್ನವನೇ ನಾನು ೩

ನೀ ಹುಟ್ಟಿಸಿದರೆ ಹುಟ್ಟಿದೆನಲ್ಲದೆ ನನಗಿಲ್ಲಿತ್ತೇನು
ನೀ ಹುಟ್ಟಿಸಿದವ ಹೊರಳಿ ನೋಡದಿರೆ ಗತಿಯೆನಗಿನ್ನೇನು ೪

ಇದ್ದದ್ದಾದರೆ ಇದ್ದದ್ದಾಗಲಿ ಸುಮ್ಮನೆ ಇನ್ನೇನು
ಇದ್ದರೆ ಎತ್ತಿಕೊ ಇರದಿದ್ದರೆ ಬಿಡು ಯಾತರ ಹಂಗೇನು ? ೫

ಇದ್ದರೆ ಬಂದೀ ಇರದಿರೆ ಬಿಟ್ಟೀ ಇದರೊಳಗುಂಟೇನು
ಇದ್ದಲ್ಲೆಲ್ಲಾ ಕಾಣಿಸಿಕೊಂಡರೆ ಹೋಗುವ ಗಂಟೇನು ೬

ಇರುವಿಯೊ ಇಲ್ಲೋ ನನಗೇನೆನಿಸದು ಇದ್ದರೆ ಹೋಣೆಯೇನು
ಇರುವಿಯೆಂದು ಸುಮ್ಮನೆಯೆನ್ನಲು ನಿಮ್ಮಪ್ಪನ ರಿಣವೇನು ೭

ನೋಡಿ ನೋಡಿ ಬೇಸರಿಸಿ ಜಗದ ಮನದಾಶೆಯೆ ಅಡಗುವದು
ಖೋಡಿಗುಣವ ನಿನಗಾರು ಕಲಿಸಿದರೊ ? ಕಾಣದೆ ಅಡಗುವದು ೮

ಧಾರ್ಮಿಕರೆಂಬುವ ಧರ್ಮಗೇಡಿಗಳು ಜಗದಲಿ ತುಂಬಿದರು
ಧರ್ಮದ ತಂದೆಯೆ ಇಂಥವನಾದರೆ ಯಾತಕೆ ನಂಬುವರು ೯

"ನಂಬುದೆ ನಚ್ಚದೆ ಕರೆದರೆ ಬರುವನೆ" ಎಂಬರು ನಿಮ್ಮವರು
"ನಂಬುವದೆಂತೋ ಆಡದೆ ನೋಡದೆ" ಎಂಬರು ನಮ್ಮವರು ೧೦

ನಾನಾ ಕರ್ಮವ ಮಾಡಿದ ಮನುಜಗೆ ಕಾಣೆನೆನುವಿಯೇನು
ನೀ ಮಾಡಿಸಿದರೆ ಮಾಡಿದೆನಲ್ಲದೆ ನನಗಿಲ್ಲಿತ್ತೇನು ?? ೧೧

ಕಂಬವನೊದ್ದರೆ ಕಿಡಿಕಿಡಿ ಬೆಂಕಿಯ ಕಾರುತೆ ಬಂದವನು
ನಂಬುಗೆಗೆಟ್ಟಂದೇಸುತಿದ್ದರು ಮಿಸುಕದನೆಂಥವನು ೧೨

ಹಿಂದಿನ ಕಥೆಗಳು ಹೊಗಳುವವಲ್ಲೋ ನಿನ್ನಯ ಕೀರ್ತಿಯನು
ಇಂದಿನ ಜಗದಲಿ ಮಾಡಿತೋರಿಸೋ ಆ ಶತಕೀರ್ತಿಯನು ೧೩

ಬಿಟ್ಟು ಬಿಟ್ಟೆನೀ ಹೇಸಿಜನ್ಮದಾ ಬರಿಯಾಶೆಯ ನಾನು
ಸುಟ್ಟು ಹೋಗಲೀ ಸಂಶಯದಾಗರ ಬದುಕಿನೊಳಿನ್ನೇನು ೧೪

ಸಾವಿಗೆ ಹೆದರುವ ಹಳೆ ಹೇಡಿಯೆ ? ನಾ ಬೇಯುವೆ ನಿನಗಾಗಿ
ಗಾವಿಲರೆಲ್ಲರು ದೇವಿಲಿಯಾಗರೆ ಭಕ್ತನ 'ಬಲಿ'ಗಾಗಿ ೧೫

ಗುಣವಂತರ ಗೋಳಾಟವೆ ಗಾವಿಲರಿಗೆ ಸಾಕಾಗಿಹುದು
ಒಣಮಾತೇನಿದು – ನಾ ಸತ್ತರೆ ಬಲು ನಗೆಗೇಡಾಗುವದು ೧೬

ನಿನ್ನಯ ಬೆಲೆಯನು ನೀನುಳಿಸಯ್ಯಾ ನಾ ಹೇಳುವದೇನು
ಚೆನ್ನಿಗರಾಯಾ ! ಕಿವಿಮುಚ್ಚದಿರೋ ! ! ಬೇಡುವೆನಿನ್ನೇನು ೧೭

———————

## ೭. ನೋಂಪಿ

ಹತ್ತೂ ನಿಟ್ಟಿಗೆ
ಹೊತ್ತಿಸಿ ಉರಿಯನು
ನಿತ್ತೆನು ನಾ ಕಿತ್ತಡಿಯಾಗಿ
ಹತ್ತೂ ನಿಟ್ಟಿಗೆ
ಹೊತ್ತಿಸಿ ಉರಿಯನು
ಕುತ್ತೆನು ನಾ ಮಾಸತಿಯಾಗಿ ೧

ಪಡೆದರು ಸರಿಯೇ
ಮಡಿದರು ಸರಿಯೇ
ಮುಡಿಸುವೆ ಹರಣವನೆಡೆಯಾಗಿ
ಪಡೆದರು ಸರಿಯೇ
ಮಡಿದರು ಸರಿಯೇ
ಮುಡಿಸುವೆ ಮೈ ಮಲ್ಲಿಗೆಯಾಗಿ ೨

ಮನಸಿನ ಮಾತಿದು
ಮನದಂತಾದರೆ
ಮನುವಿನ ಮಗ ನಾನಾಗುವೆನು
ಮನಸಿನ ಮಾತಿದು
ಮನದಂತಾದರೆ
ಮನದಂತಾದರೆ
ಪ್ರಣವ ಸುಮಂಗಲೆಯಾಗುವೆನು ೩

ನೆನಸಿನ ಕೋರಿಕೆ
ಕನಸೇ ಆದರೆ
ತನು ನಿಸಿದಿಗೆಗಲ್ಲಾಗುವದು

ನೆನಸಿನ ಕೋರಿಕೆ
ಕನಸೇ ಆದರೆ
ಮನ ಮಾಸ್ತಿಯ ಕಲ್ಲಾಗುವದು ೪

ಕಲ್ಲಾದರು ಸರಿ
ಹುಲ್ಲಾದರು ಸರಿ
ಬಲ್ಲಂದದ ಬಳಲಿಕೆ ಸಾಕು
ಕಲ್ಲಾದರು ಸರಿ
ಹುಲ್ಲಾದರು ಸರಿ
ಎಲ್ಲಂದದ ಏಳಿಕೆ ಸಾಕು ೫

---

## ೮. ಕೆಸರೊಳಗಿನ ಕಮಲ

ಏಳು ಕಮಲವೆ, ನಿನ್ನ
ಯಾವ ಕರ್ಮದಿ ಬಂದು
ಇಂಥ ಕೆಸರಲ್ಲಿ ಬಿದ್ದೇ ?
ಹೇಳು ಕಮಲವೆ, ನಿನ್ನ
ಯಾವ ಪುಣ್ಯದಿ ಮತ್ತೆ
ಮೊಗವೆತ್ತಿ ಮೇಲಕೆದ್ದೇ?
ಅಚ್ಚ ಮಾನಸದಲ್ಲಿ
ಇಚ್ಛೆಯಿಂದಿರಬಹುದು
ಏಸೊ ಯುಗಯುಗದ ವರೆಗೆ
ರೊಚ್ಚು ಗೊಳದಲ್ಲಿ ನೀ
ಬಿದ್ದು ಬದುಕಿದೆಯಲ್ಲ !
ಚಿನ್ನ ಬಂದಂತೆ ಒರೆಗೆ
ಅಂಗಗುಣದಿಂದ ನೀ
ದಿನದಿನಕೆ ಬೆಳಬೆಳೆದು
ಕೆಸರ ಕೊಸರೇಳಬಹುದು
ಬಿಂಗ ಬಿಡಿಸುವ ಗಾಳಿ
ಭೋರೆಂದು ಬೀಸುತಿರೆ
ಕಲಕು ನೀರೇರಬಹುದು
ಅರಮನೆಯ ಪರದೆಯಲಿ
ಗಂಧದೆಣ್ಣೆಯ ದೀಪ
ಉರಿಯಬಹುದೇನು ಚೋದ್ಯ
ಮುರುಕು ಕೊಂಪೆಯ ಪಣತಿ–
ಗೇನು ಗತಿ ? ರಾಜ ಸಿರಿ–
ಗೇನುಂಟು ಈ ಕುಚೋದ್ಯ ?

ಹೇಳು ಕಮಲವೆ, ಮೇಲೆ
ಮುಖಮಾಡಿ ದೈನಾಸ
ದಿಂದೇನು ನೋಡುತಿರುವೆ ?
ಗೋಳಿಟ್ಟು ಗೋಣೆತ್ತಿ
ಕೈಮುಗಿದು ಕೈಲಾಸ
ದಿಂದೇನು ಬೇಡಿತರುವೆ ?
ಏನಿಲ್ಲ ಎಂತಿಲ್ಲ
ಅಲ್ಲೆನ್ನ ದೊರೆ ನಲ್ಲ
ನಲ್ಲೆಯರ ಬಳಗದೊಳಗೆ
ತಾನಲ್ಲಿ ಇಹನಲ್ಲ
ನಾನಿಲ್ಲಿ ಕೆಳಗಿಳಿಸಿ
ಕರೆಯುತಿಹನೊಳಗೆ ಒಳಗೆ
ಹದಿನಾರು ಸಾವಿರದ
ಅಬ್ಜಕೋಟಿಗು ಮಿಕ್ಕಿ
ರಾಣಿಯರು ರಾಜಮಣಿಗೆ
ಮದನಾರಿಯರ ಬಳಗ
ಮುತ್ತಿ ಮುಗಿಬಿದ್ದಿರಲು
ಬಹನೆ ಬಿಟ್ಟೆನ್ನ ಬಳಿಗೆ ?
ಒಬ್ಬಳನು ಮುದ್ದಿಡುತ
ಒಬ್ಬಳನು ತೆಕ್ಕಿಸುತ
ಮತ್ತೊಬ್ಬಳನು ಬಳಸುತ
ಒಬ್ಬೊಬ್ಬಳನೆ ರಮಿಸಿ
ಉಬ್ಬುಬ್ಬಿಸುತ ಮತ್ತೆ
ನೋಟ ನನ್ನೆಡೆ ಸುಳಿಸುತಾ
ಸನ್ನೆಯಿಂದೆನ್ನೆದೆಗೆ
ರನ್ನ ಮುದ್ರೆಯನೊತ್ತಿ
ಸನ್ನೆ ಹಿಡಿಸಿರುವನಲ್ಲಾ
ಇನ್ನೆಂದಿಗೇ ಇರಲಿ
ಸನ್ನಿಧಿಯ ಭರವಸದ
ಕೀಲು ಜಡಿಸಿರುವನಲ್ಲಾ

ಎಲ್ಲ ನಲ್ಲೆಯರಾಟ
ವೆಲ್ಲ ಮುಗಿಯಲಿ, ಬಳಿಕ
ಬಾರೆದಿರದೆನ್ನ ಸರತಿ
ಅಲ್ಲಿವರೆಗಿಲ್ಲಿ ನಾ
ಅಳಿವಿಂಡಿನೊಡನಾಡಿ
ಹೊತ್ತು ನೂಕುವೆನು ಗರತಿ

ಏಳು ಕಮಲವೆ, ನಿನ್ನ ಯಾವ ಕರ್ಮದಿ ಬಂದು
ಇಂಥ ಕೆಸರಲ್ಲಿ ಬಿದ್ದೇ ?
ಹೇಳು ಕಮಲವೆ, ನಿನ್ನ ಯಾವ ಪುಣ್ಯದಿ ಮತ್ತೆ
ಮೊಗವೆತ್ತಿ ಮೇಲಕೆದ್ದೇ ?

"ತಚ್ಚಿಂತಾವಿಪುಲಾಹ್ಲಾದ ಕ್ಷೀಣಪುಣ್ಯಚಯಾ ತಥಾ
ತದಪ್ರಾಪ್ತಿಮಹದುಃಖ ವಿಲಿನಾಶೇಷಪಾತಕಾ ॥"

## ೯. ಮುಸುಕು

ನೀನು ನಿನ್ನ ತೋಟದಲ್ಲಿ
ನಾನು ನನ್ನ ಕೊಂಪೆಯಲ್ಲಿ
ಅತ್ತೆ ಕೊಡುವ ಕಾಟ ಬೇರೆ
ಮತ್ತೆ ಅಡ್ಡ ಗುಡ್ಡ ಬೇರೆ
ಜೀವವೆಲ್ಲ ತೋಟದಲ್ಲಿ
ಖೋಡಿ ಕೆಲಸ ಕೊಂಪೆಯಲ್ಲಿ
ತೋಟ ಮನೆಗೆ ದೂರ ಬೇರೆ
ಕಾವಲತ್ತೆ ಕಾಳ ಬೇರೆ
ಕೊಂಪೆ ನನಗೆ ಜನ್ಮಗಂಟು
ತೋಟ ನಿನಗೆ ಗಚ್ಚಿಗಂಟು
ಅತ್ತೆ ಕದನ ಮರೆವಳಲ್ಲ
ಜೀವ ಸುಮ್ಮನಿರುವದಿಲ್ಲ

ತೂಗದಂಥ ದಗದ ನನಗೆ
ನೀಗದಷ್ಟು ಕೆಲಸ ನಿನಗೆ
ಧೀರವಿರದ ಬಾಲೆ ನಾನು
ಘೋರ ಗಂಭೀರ ನೀನು
ನಿನಗೆ ನಿನ್ನ ದುಡಿವ ಲಕ್ಕು
ನನಗೆ ಸತತ ನಿನ್ನ ಬಿಕ್ಕು
ನೀನು ನಿನ್ನ ತೋಟದಲ್ಲಿ
ನಾನು ನನ್ನ ಕೊಂಪೆಯಲ್ಲಿ

ಸುಗ್ಗಿಯಲ್ಲಿ ನಿನಗೆ ತೊಡಕು
ಅಗ್ಗಿಯಲ್ಲಿ ನನಗೆ ಮಿಡುಕು
ನಿನ್ನ ದಗದ ನಿನಗೆ ಹಿರಿದು

ನನ್ನ ಕರುಳು ಬರಿದೊ ಬರಿದು
ಉಂಡು ಹಸಿದ ಘಾಸಿ ತೀರ
ಕೂಡಿ ಅಗಲದಿರವು ಘೋರ
ನಿನ್ನ ನೆರೆಯಲಿರುವ ಆಸೆ
ನಿನ್ನನೆಂದು ಅಗಲದಾಸೆ
ನಿನ್ನ ನೋಡಿ ನಲಿಯುವಾಸೆ
ನಿನ್ನ ಕೂಡಿ ಕೆಲೆಯುವಾಸೆ
ಉದಯ ನಿನ್ನ ಸನ್ನಿಧಾನ
ಅಗಲಿದೊಡನೆ ಅಸ್ತಮಾನ
ಚೊಕ್ಕ ಬೆಳಕು ನಿನ್ನ ಕೂಟ
ಚಿಕ್ಕ ಝುಳಕು ನೆನವಿನಾಟ
ಸನಿಹವೆಂಬುದಚ್ಚ ಬೆಳಕು
ನೆನಹು ಮೊದಲೆ ಜಿಣುಕು ಮಿಣುಕು.
ಬೀಸಿ ಬಡಿವ ಗಾಳಿ ಬೇರೆ
ಧೂಸು ದುಮ್ಮ ಧೂಳು ಬೇರೆ
ನೀನು ನಿನ್ನ ತೋಟದಲ್ಲಿ
ನಾನು ನನ್ನ ಕೊಂಪೆಯಲ್ಲಿ

———————

## ೧೦. ದೇವತಾ ಪೃಥಿವಿ

ಮೊಲೆಹಾಲು ಸಾಕಮ್ಮಾ ಸವಿಲಾಲಿ ಬೇಕಮ್ಮಾ
    ಮುದ್ದಾಡಿ ರಮಿಸಿ ಮೈದಡವ । ಏಳಮ್ಮಾ
    ಮಲಗಿರುವ ತಾಯಿ ಪೃಥಿವೀ ೧

ಹೊಟ್ಟೀಗಿ ಹಸಿವಿಲ್ಲ ಕರುಳೀಗಿ ಸೊಗಸಿಲ್ಲ
    ಮೊಲೆ ಸಾಕು ಮುದ್ದುಕೊಡು ತಾಯಿ । ಏಳಮ್ಮಾ
    ಮಲಗಿರುವ ತಾಯಿ ಪೃಥಿವೀ ೨

ಹಸಿವೀಗಿ ಮೊಲೆಯುಂಡೆ ಕಸವೀಸಿಗೇನುಳ್ಳೆ
    ಹಾಲೊಲ್ಲೆ ಸಾಕು ಬಿಗಿದಪ್ಪು । ಏಳಮ್ಮಾ
    ಮಲಗಿರುವ ತಾಯಿ ಪೃಥಿವೀ ೩

ಮೊಲೆಹಾಲು ರುಚಿಗೊಂಡು ಮನದ್ಹಾಲ ಬಯಸೀನ
    ಗುಟುಗುಟುಕಿಗೊಮ್ಮೆ ಮಿಕಿಮಿಕಿ । ಏಳಮ್ಮಾ
    ಮಲಗಿರುವ ತಾಯಿ ಪೃಥಿವೀ ೪

ಹೂವಿಽನ ಮಕರಂದ ಹಂಣಿಽನ ಮಾಧುರಿಯ
    ಹಾಲ್ಹೀಂಗ ಇನ್ನ ಮನಹ್ಯಾಂಗ । ಏಳಮ್ಮಾ
    ಮಲಗಿರುವ ತಾಯಿ ಪೃಥಿವೀ ೫

ಚಂದರನ ಚೆಲುವೀಕಿ ಇಂದರನ ಹೋಲೀಕಿ
    ಮೈ ಹೀಂಗ ನಿನ್ನ ಮನ ಹ್ಯಾಂಗ । ಏಳಮ್ಮಾ
    ಮಲಗಿರುವ ತಾಯಿ ಪೃಥಿವೀ ೬

ಹಿಂದಿತ್ತು ಕಾರಿರುಳು ಇಂದೀಗಿ ಹೂಬಿಸಿಲು
    ಅಂದಿಗಿಂದೀಗಿ ಒಂದೇನ ? । ಏಳಮ್ಮಾ
    ಮಲಗಿರುವ ತಾಯಿ ಪೃಥಿವೀ ೭

ಕಣ್ಣು ಅರಳದ ಕೂಸು ಮ್ಯಾಲ ಕತ್ತಲೆ ಗವಿಯು
ಆಗಲ್ಲ ಕಂಡೆ ನಾನೀಗ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೮

ಮೊಲೆಹಾಲ ಧಾರೀಗಿ ಎಲ್ಲೀದೊ ಸೆಲೆಯೆಂದೆ
ಆಗೆಲ್ಲಿ ತಾಯಿ ಈ ನೆಲಿಯೆ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೯

ಏನಂತೊ ಅಂದಿದ್ದ ತಾಯಂತ ಈಗಂದ
ಕಣ್ಣೀಲೆ ಕಂಡು ಮನಗಂಡು । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೦

ಉಂಡದ್ದು ಹೌದಮ್ಮಾ ಕಂಡದ್ದು ನಿಜವಮ್ಮಾ
ಉಂಡೇನು ? ಈಗ ಕಂಡೇನು ? ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೧

ಕತ್ತಲೆಯ ಆ ಸೋಂಕು ಹೂಬಿಸಿಲ ಈ ಮಂಕು
ಕಪ್ಪೇನು ಮತ್ತ ಬಿಳುಪೇನು । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೨

ಕಾಣsದ ಆ ಕುರುಡು ಕಾಣೂವ ಈ ಕುರುಡು
ಕಂಡೇನು ಕಾಣದಿದ್ದೇನು । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೩

ಅರುವಲ್ಲ ಮರುವಲ್ಲ ಅರಿತದ್ದು ಸ್ಥಿರವಲ್ಲ
ಅರಿತೇನು ಆಸೆ ತೀರದೆ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೪

ಇಲ್ಲಂಬು ಮರುಗಲ್ಲ ಅಲ್ಲಂಬು ಅಳುಕಲ್ಲ
ಇದ್ದಿಲ್ಲದಂಥ ಪರಿ ಹೊಲ್ಲ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೫

ಕಿಂಭೂತ ಕೊರಡೊಂದು ತುಂಬೀತು ಕೊನರಾಗಿ
ಹೂವಾಗಿ ಹಣ್ಣು ಬಿಡಲಿಲ್ಲ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೬

ಎಲ್ಲಿsಯ ಈ ನಿದ್ದಿ ಕಾಳsನ ಕರಿ ನಿದ್ದಿ
ಇದ್ದೇನು ಇಲ್ಲದಿದ್ದೇನು । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೭

ತಟ್ಟಿದರು ಮಿಸುಕಿಲ್ಲ ಹಲುಬಿದರು ಉಲುವಿಲ್ಲ
ತುಟಿಯಲ್ಲಿ ತಟಕು ಅಲುಗಿಲ್ಲ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೮

ಮರೆತು ಮಲಗುವಳಲ್ಲ ಅರಿತು ಆತುರಳಲ್ಲ
ನಿನಗಾಟ ನನಗ ಎದೆಗಿಚ್ಚ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೧೯

ಅಂದು ಆಗಿಸಬಲ್ಲಿ ನೆನೆದು ನಾಟಿಸಬಲ್ಲಿ
ಮಾರೀಯ ಮುಸುಕು ತೆರದೇಳ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೨೦

ಹಾಲುನಿದ್ದಿಯ ತೊರೆಯೆ ಜೇನುನಿದ್ದಿಯ ತೊರೆಯೆ
ಸಕ್ಕರಿಯ ನಿದ್ದಿ ತೊರದೇಳ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೨೧

ಕನಸೀನ ಕನ್ನಕ್ಕಿ ಮನಸೀನ ಮಾಯಮ್ಮಾ
ಎಚ್ಚತ್ತು ತಾಯಿ ಎವೆಬಿಚ್ಚ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೨೨

ಏಳಮ್ಮ ಏಳಮ್ಮಾ ಏಳೆನ್ನ ತಾಯಮ್ಮಾ
ಏಳದೆ ಜೀವ ಕೇಳದ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೨೩

ಈ ಗಾಳಿ ನಿನ್ನುಸಿರ ಈ ಬೆಂಕಿ ಮೈಗಾವ
ಮುದುಡೀದ ಮೊಗ್ಗಿ ಅರಳೀಸ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೨೪

ಮೊಲೆಹಾಲು ಸಾಕಮ್ಮ ಸವಿಲಾಲಿ ಬೇಕಮ್ಮಾ
ಮುದ್ದಾಡಿ ರಮಿಸಿ ಮೈದಡವ । ಏಳಮ್ಮಾ
ಮಲಗಿರುವ ತಾಯಿ ಪೃಥಿವೀ ೨೫

———————

## ೧೧. ಶರಣರ ವಚನಗಳು

ರಯದಿ ಕೊಡವನ್ನೊಡೆದು
ಬಯಲ ನೋಡುವುದೇಕೆ ?

ಒಳಗಿಹುದೆ ಬಯಲೆಂದು
ತಿಳಿದಡದು ಸಾಲದೇ ?

ಅಂಗುರೀಯವ ಮುರಿದು
ಬಂಗಾರ ನೋಡುವರೇ ?

ಕನಕವೆಂದದನೆ ಸಲೆ
ನೆನಿಸಲದು ಸಾಲದೇ ?

ತನಗಳಿವ ತಂದು ನೆರೆ
ಘನವ ನೋಡುವದೇಕೆ ?

ಅರಿಯೆ ತಾಂ ಘನವೆಂದು
ಗುರುವೇ । ಅದು ಸಾಲದೇ ?

———

## ೧೨. ಹೀಗೇಕೆ ಹುಚ್ಚೀ ?

ಮೊದಲೆಂದೊಳಮ್ಮೈಗೆಳಗಣ್ಣೋದುವೊ
ಮೊದಲೆಂದರಿವಿನ ಕಳೆ ಕಂಗೊಳಿಸಿತೊ
ಅದು ಮೊದಲೆಲೆ "ನರ್ತಕಿ ನೀನಾರೆ?"
ಎಂದತಿ ಹಂಬಲಿಸಿ ೧

ಇಂದೇನೋ ಲಕ್ಕನೆ ಮೋರೆಯ ಗುರು
ತೊಂದಿಷ್ಟೊಮ್ಮೆಗೆ ತೊಳೆದಂತಾಗಲು
ಬಂದೆನ್ನಂ "ರಾಧಾನರ್ತಕಿ ನೀನಲ್ಲೆ"–
ಎಂದುಲಿವೆ ೨

ಚೆನ್ನೆಯೆ ! ರಾಧೆಯೆ ! ! ಮುದ್ದಿನ ಜೀವವೆ !
ನಿನ್ನ ಮಲೂಲತನಕ್ಕೇನೆನ್ನಲಿ
ನನ್ನನೆ ರಾಧಾ ನರ್ತಕಿಯೆನ್ನುವೆ
ನೀನಲ್ಲವೆ ರಾಧೆ ? ೩

ರಾಧೆಯೆ ! ನಿನ್ನೀ ಹುಚ್ಚಿಗೆ ನಗುವೆನು
ಕೇದಗೆ ಬನದೊಳ್ ಕಾದಿಹನಿನ್ನೊಡ
ನೈದಿ ಕುಣಿಯಲು ನರ್ತಕಿಯಾಗಿಹ
ಕೃಷ್ಣನು ನಾನಲ್ಲೇ ? ೪

———

## ೧೩. ನರ್ತಕಿ ನೀನಾರೇ ?

ಜುಳು ಜುಳು ಹರಿಯುವ ಝರಿಗಳ ಜತೆಯೊಳು
    ಗಳಗಳ ಗಳಪುವ ಗಿಳಿಗಳ ದನಿಯೊಳು
    ಬಳಬಳ ಬಳಕುವ ಗಿಡಮರಬಳ್ಳಿಗಳೆಲೆಗಳ ತಾಳದೊಳು

ಪಳಪಳ ಹೆಜ್ಜೆಯನೊಗೆದೊಯ್ಯಾರದಿ
    ಸುಳುಸುಳು ಸುಳಿಯುತೆ ನೃತ್ಯಮನೆಸಗುತೆ
    ಬಳೆನೇವುರಗಳ ಝಣಝಣವೆನಿಸುವ ನರ್ತಕಿ ನೀನಾರೇ ?

———

## ೧೪. ಬಾ

ಹೊಂಧೂಳಿ ಕೆಂಧೂಳಿ ಚೆಂಧೂಳಿಗಳ ನಡುವೆ
ಮುನ್ನೀರು ಕೆನ್ನೀರು ಪನ್ನೀರುಗಳ ನಡುವೆ
ಬಿರುಗಾಳಿ ಹೆಗ್ಗಾಳಿ ನಸುಗಾಳಿಗಳ ನಡುವೆ
ನಲಿವಳಲುಗಳ ನೋಡದೆ ೧

ನಲಿದಾಡಿ ಕುಣಿದಾಡಿ ಸುಳಿದಾಡಿ ತುದಿಬೆರಲೊ
ಳಿರಿಸಿ ಮೂಲೋಕಗಳ ಕುಣಿಸಿ ಹಾರಿಸಿ ಪುಟಿಸಿ
ಸೆಂಡಾಡಿ ಸುಮ್ಮಾನವಾಂತು ಸೊಬಗಿಂ ಕುಣಿವ
ಸವಿಗಾರ ಬಾರಿಲ್ಲಿಗೆ ೨

ಸವಿಗಾರ ! ಬಾರೆನ್ನ ಮನವೆಂಬ ಮಾಮರದ ಸೆಳೆಗೊಂಬು
ಗಳ ತುದಿಯೊಳು
ಕವಿಯಾಗಿ ಪಾಡುತಿಹ ಕೋಗಿಲೆಯ ದನಿಗೇಳೆ
ಕಿವಿಗಪ್ಪುದಾನಂದವು ೩

ಬಾರಿಲ್ಲಿ ಮಲ್ಲಿಗೆಯ ಮಂಟಪದೊಳಿರಿಸಿರುವ
ಹೊಸದಳಿರ ಹಾಸಿಗೆಯೊಳು
ನೀರ ! ನೀಂ ನಲಿದೆನ್ನ ಮುದ್ದಿಡುವೊಡಾನಿರದೆ
ಬೆರೆಯುವೆನು ಮರೆದಿಹವನು ೪

---

# ೧೫. ಮಧುರಗೀತ

“ಸಕಲ ನಿಃಕಲನಯ್ಯಾ, ನಿಃಕಲ ಸಕಲನಯ್ಯಾ
ಸಕಲನಾಗಿ ಸಂಸಾರಿಯಲ್ಲ, ನಿಃಕಲನಾಗಿ ವೈರಾಗಿಯಲ್ಲ
ಸಂಸಾರಿಯಲ್ಲದ ಸಂಗ, ವೈರಾಗಿಯಲ್ಲದ ನಿಸ್ಸಂಗ
ಉಭಯ ಸಂಗದಿಂದ ಮಹತ್ತನೈದಿರ್ಪನಾಗಿ
‘ಸ್ಥಾವರಂ ಜಂಗಮಂ ಚೈವ ದ್ವಿವಿಧಂ ಲಿಂಗಮುಚ್ಯತೇ’
ಎಂಬುದಾಗಿ ಕೂಡಲಚೆನ್ನಸಂಗಾ ನೀನಿದ್ದುದಂತೆ ಇರ್ಪನಲ್ಲದೆ
ನಿಮ್ಮ ಶರಣ ಕ್ಷೀಣನಲ್ಲ.”

– ಚೆನ್ನ ಬಸವಣ್ಣ

### ಮೊದಲನೆಯ ಮುದ್ದು

(ಕುಸುಮ ದ್ವಿಪದಿ)

ಬಲುದಿನದ ಬಯಕೆಯೊಂದಿತ್ತೆನ್ನ ತಮ್ಮಯ್ಯ
ನಿನ್ನ ಮೇಲೊಂದು ಹಾಡೇನೆಂಬುವಾ
ಹಲವು ದಿನದಿಂದಲೂ ಪ್ರತಿಭೆ ಮಲಗಿದ್ದವಳು
ಇಂದಿದೇ ಎದ್ದಿಹಳು ಬಾ ನೋಡುವಾ ೧

ನಿನ್ನ ನೆವದಿಂದೆನ್ನ ಗೆಳೆತನದ ಕುಲಕೋಟಿ
ಗೆಲ್ಲ ನನ್ನೊಲವಿನಾ ಸಿರಿಯ ಪೇಳ್ವೆ
ಇನ್ನೇನು ಈ ಸಂಧಿ ನನ್ನ ಕಕ್ಕುಲತೆಯಾ
ಬರವ ಹಿಂಗಿಸಿತೆಂದೆ ತಿಳಿದುಕೊಳ್ವೆ ೨

ಸಂಗ ಸಂಸ್ಕೃತಿ ಮೂಲ ಬುದ್ಧಿ ಬಳಕೆಯ ಸುಫಲ
ಇದು ತಾನೆ ಭೌತಿಕದ ಬೀಜಮಾತು
ಅಂಗ ಬಾರದ ಮುನ್ನ ಆತ್ಮ ಬಾರದೆ ಇಲ್ಲ
ಹಿಂದಿನದೆ ಇಂದು ಇದು ಶಾಸ್ತ್ರಹೇತು ೩

ದೇವಲೀಲೆಯೊ ಕಾಣೆ ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು ೪

ಪ್ರೇಮಕ್ಕೆ ಪ್ರತಿಯಿಲ್ಲ ಮೋಹಕ್ಕೆ ಪ್ರೀತಿ ವೈರ
ಆದರಕನಾದರವು ಉಂಟೆವುಂಟು
ಪ್ರೇಮ ತಾನಾತ್ಮದ್ದು ಮೋಹವದು ಜೀವದ್ದು
ಆದರವು ಬುದ್ಧಿವೈಭವದ ಗಂಟು ೫

ಪ್ರೀತಿಯದು ಅರಿತುಮಾಡಿದ ಮೋಹ ಮೋಹವದು
ಅರುವಿಲ್ಲದೊಂದೊಲವು ಬೇರೆಯೇನು
ರೀತಿಯಲಿ ಪರಿಯುಂಟು ಪ್ರೀತಿ ಮೋಹಗಳಲ್ಲಿ
ಬೆಳಕು ಕತ್ತಲೆಯಷ್ಟು ಮತ್ತೆಯೇನು ೬

ಮಮತೆ ಪ್ರೀತಿಯ ಸಿರಿ ಮಮತ್ವ ಮೋಹದ ಭಾಗ್ಯ
ಜಾತಿಯೊಂದಾದರೂ ರೀತಿ ಬೇರೆ
ಸುಮತಿ ನುಡಿವನೆ ಹಣ್ಣುಕಾಯಿಯೊಂದೇ ಎಂದು
ಒಂದೆಂದರೂ ಅದರ ಸವಿಯೆ ಬೇರೆ ೭

ಪ್ರೀತಿ ಹಿಗ್ಗಿನ ತಿರುಕಿ ಮೋಹ ಸೌಖ್ಯದ ಹರಕಿ
ಸುಖಕೆ ವ್ಯತ್ಯಯ ಬಂದರದುವೆ ವೈರ
ಪ್ರೀತಿಯೊಮ್ಮೊಮ್ಮೆ ನಸು ಮೂರ್ಛೆಹೊಂದೀತಿಷ್ಟೆ
ಜೀವಕ್ಕೆ ಹೆಚ್ಚಾಗೆ ಭವದ ಭಾರ ೮

ಎಷ್ಟಾದರೂ ಪ್ರೀತಿ ಸ್ವಾರ್ಥ ಸಂಬಂಧಿಕವು
ಕರುಣವೇ ಶುದ್ಧ ನಿಃಸ್ವಾರ್ಥವೆಂಬಾ
ಶಿಷ್ಟದೃಷ್ಟರ ಮಾತು ಸಟೆಯಲ್ಲದಿದ್ದರೂ
ಪ್ರೀತಿಗೂ ಬೆಲೆಯಿಲ್ಲದಿಲ್ಲ ತುಂಬ ೯

ಸರ್ವಭೂತಗಳಲ್ಲಿ ಸಮಬುದ್ಧಿಯನ್ನಿಟ್ಟು
ತನ್ನಂತೆ ಅನ್ಯಕ್ಕೆ ಮರುಕುಗೊಳವಾ
ಸರ್ವಶ್ರೇಷ್ಠರನಾರು ಅಲ್ಲೆನ್ನಬಹುದಯ್ಯ
ಸರ್ವರಿಗೆ ಸಾಧ್ಯವೇ ಅಂಥ ಭಾವ ೧೦

ಆತ್ಮದಾ ಅಮರತ್ವ ದೇವನಾ ಅಸ್ತಿತ್ವ
ಸ್ವಪ್ರತೀತಿಯ ವಿಷಯವಿಲ್ಲದೀಗ
ಆತ್ಮಾನುಭಾವಿಗಳ ಅಚ್ಚ ತತ್ವದ ಮಾತು
ಆಚರಣೆಗರಿದಿಂದು ಅಂಥ ಯೋಗ ೧೧

ಕಾಯಗಳ ಮೇಲೆ ಕಾಲಿಟ್ಟಾಗ ಜೀವನಾ
ಜೀವದಾ ಹಂಗು ನನಗಾತ್ಮಗೇನು
ಮಾಯವನ್ನರಿತರೂ ಕಾಯಗುಣ ಬಿಡಲಿಲ್ಲ
ಇಂದಿಂಥ ನಮಗಿನ್ನು ದಾರಿಯೇನು ೧೨

ಬಂದುದಕೆ ಬಾರೆಂಬ ಹೋದುದಕೆ ಹೋಗೆಂಬ
ಇದ್ದದ್ದಕ್ಕಿರಲಿ ಬಿಡಲೆಂದು ಬಗೆವಾ
ಹಿಂದಿನಾ ಧೀರರಿಗೆ ಸಾಜವಿತ್ತಾ ಮಾತು
ಇಂದಿಗೀ ಸ್ವಾರ್ಥವೇ ಜಗದ ಜೀವ ೧೩

ಸ್ವಾರ್ಥಸಾಮ್ರಾಜ್ಯದೀ ಭವನರಕ ಲೀಲೆಯಲಿ
ನಿಃಸ್ವಾರ್ಥ ಕಾರುಣ್ಯ ಕಾಣದಾಗೆ
ಪಾರ್ಥಿವರ ಪಾಲಿಗೀ ಪ್ರೇಮ ಸುಸ್ವಾರ್ಥವೂ
ಸಾಧ್ಯವೋ ಅಲ್ಲವೋ ಎಂದೆನಾಗ್ಗೆ ೧೪

ನಿಃಸ್ವಾರ್ಥವಾತ್ಮಗುಣ ಸ್ವಾರ್ಥವಿದು ಜೀವಗುಣ
ಆತ್ಮಸ್ಥ ಜೀವಗುಣ ಸುಸ್ವಾರ್ಥವು
ನಿಃಸ್ವಾರ್ಥ ಸ್ವಾರ್ಥಗಳ ಮೇಳವಿದೆ ಪ್ರೀತಿಯಲಿ
ಇದರಲ್ಲಿಯೇ ಇಂದು ನಮಗರ್ಥವು ೧೫

ವೈರಾಗ್ಯದವರ ನಿಸ್ಸಂಗವು ಅರಿದೆಮಗೆ
ವ್ಯವಹಾರಿಕರ ಸಂಗ ಕೂಡ ಹಾಗೇ
ವೈರಾಗ್ಯ ವ್ಯವಹಾರಗಳ ಮಧ್ಯಯಾನದಲಿ
ಮಧುರ ಸಂಗವೆ ಇಂದು ಗತಿಯು ನಮಗೆ ೧೬

ಧೀರವೀರರ ಪಥಕೆ ಗಂಡುಗಲಿತನ ಬೇಕು
ದಿವ್ಯತತ್ವಜ್ಯೋತಿ ಸ್ಫುರಿಸಬೇಕು
ಯಾರಿಗೇನಾತ್ಮವಿಶ್ವಾಸವೇ ಒಳಗುರುವು
ಒಳಗಿನಂತೇ ಹೊರಗೆ ನಮ್ಮ ಜೀಕು ೧೭

ಗಂಡುಗುಣ ನನ್ನಲ್ಲಿ ಆದಿಯಲ್ಲೇ ಇಲ್ಲ
ಬಾಲೆಯರ ಜೊತೆಯೆನಗೆ ಬಾಲ್ಯದಲ್ಲೇ
ಕೆಂಡದಂಥಾದ್ದೆನ್ನ ಸುತ್ತಲಿನ ಸ್ಥಿತಿಬೇರೆ
ಜತೆಯಂತೆ ಮತಿ ನಿನಗೆ ಗೊತ್ತಿಯಿಲ್ಲೇ ೧೮

ಹೊರಗೆ ಇಂಥಾ ಬೆಂಕಿ ಒಳಗೆ ಎಂಥಾ ಉರಿಯೊ
ನನ್ನ ತಳಮಳಿಕೆ ಬಲ್ಲವನೆ ಬಲ್ಲ
ಕರಗಿ ನಾ ಕುದಿಯುತಿರೆ ಮರುಗಿ ನೀನೊಳಧುಮುಕಿ
ಏಕರಸವಾಗಿ ಸರಿಬೆರೆತೆಯಲ್ಲ ೧೯

ದೇವಲೀಲೆಯೊ ಕಾಣೆ ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು ೨೦

## ಎರಡನೆಯ ಮುದ್ದು

ಯಾರು ಹುಟ್ಟಿಸಿದವರು ಯಾಕೆ ಹುಟ್ಟಿದೆವಯ್ಯ
ಮುಂದೆ ನಾವಿನ್ನೆಲ್ಲಿಗ್ಹೋಗುವವರೋ

ಯಾರು ಮಾರಾಯರೋ ಹಡೆದು ಹೊರೆಯನು ಹೊರಿಸಿ
ಹೊರದೂಡಿ ಹೊರಳಿ ಸಹ ನೋಡದವರೋ ೧

ಹುಟ್ಟಿಸುವ ಮೊದಲು ಮೊಲೆಹಾಲು ಮೂಡಿಸಿದವಗೆ
ಮೊರೆಯಿಟ್ಟರೂ ಇಂಥ ಮೌನವೇಕೊ
ಕೊಟ್ಟು ಮಳೆಬೆಳೆ ಭೂಮಿಸೀಮಿ ರವಿಶಶಿಗಳನು
ಕರುಣಧಾಭಾಸವನ್ನಿಟ್ಟನೇಕೊ ೨

ಘೋರಾಂಧಕಾರದಲಿ ಬೆಳಕು ಮುಚ್ಚಿಡಬಲ್ಲ
ಬಟ್ಟಬಯಲನೆ ಗಟ್ಟಿಗೊಳಿಸಬಲ್ಲ
ಮೀರಿದಾ ಮಹಿಮ ತಾನೆಲ್ಲ ಬಲ್ಲವನಯ್ಯ
ನಮ್ಮ ಮನಸನ್ನೇಕೆ ತಿಳಿಯಲೊಲ್ಲ ? ೩

ತಮ್ಮ ಕರ್ಮವೆ ತಮ್ಮ ಸರ್ವಫಲಗಳ ಮೂಲ
ಅರುವಿಲ್ಲದತ್ತರವನೇಕೆ ಕಾದಾ?
ನಮ್ಮ ಬೆರಳೇ ನಮ್ಮ ಕಣ್ಣಿಗಿಕ್ಕುವುದೊಂದು
ಸೋಜಿಗದ ಹಂಚಿಕೆಯು ಕರ್ಮವಾದ ೪

ಹುಟ್ಟಿಸೆಂದಾತನಿಗೆ ಬಿನ್ನವಿಸಿದವರಾರೊ
ಕೆಟ್ಟ ಕೃತಿ ತಡೆಯಬೇಡೆಂದರಾರೊ
ಇಷ್ಟೆಲ್ಲ ತಾ ಮಾಡಿ ತಪ್ಪುಹೊರಿಸಿದ ಬಳಿಕ
ಸೆರೆಸಿಕ್ಕ ಜೀವರಿಗೆ ದಿಕ್ಕು ಯಾರೊ ೫

ಏನಾದರೇನಾತ್ಮ ನಾಶವಾಗುವದಲ್ಲ
ಸುಳ್ಳು ಕೂಗಿನ ಬೆಲೆಯೆ ಅವನಿಗಿಲ್ಲ
ಏನೆ ಆದದ್ದೆಲ್ಲ ನಮ್ಮ ಹಿತಕೆಂದೆಂಬ
ಜುಲುಮೆಯಾ ನಿಶ್ಚಿಂತೆಗರ್ಥವಿಲ್ಲ ೬

ಸುಖದುಃಖವೆಂಬುವುದು ಮನದ ಭ್ರಮೆಯೆಂದೆಂಬ
ಆನಂದವಾದಿಗಳ ನೆಲೆಯನರಿಯೆ

ವಿಕಟ ರೋಗದ ಬಾಧೆ ಹಾವು ಚೇಳಿನ ವೇಧೆ
ಇದು ಕೂಡ ಕಲ್ಪನೆಯ ಬಗೆಯ ಭ್ರಮೆಯೆ ೭

ಬೆಂಕಿ ಬೇಯಿಸದಯ್ಯ ಗಾಳಿ ಹಾರಿಸದಯ್ಯ
ನೀರು ತೊಯ್ಸದು ಕತ್ತಿ ಕಡಿಯದಯ್ಯ
ಶಂಕೆ ಬಿಟ್ಟಾತ್ಮವನ್ನೆಷ್ಟು ಭಾವಿಸಿದರೂ
ದೇಹಬೋಧವು ಇದ್ದೆಯಿರುವುದಯ್ಯ ೮

ನಿದ್ದೆಯಾಚೆಗೆ ತೂರ್ಯವೆಂಬುದೊಂದುಂಟಂತೆ
ಯೋಗದಿಂದಾ ಸ್ಥಾನ ಸಾಧ್ಯವಂತೆ
ಸಿದ್ಧನಿಲ್ಲವೆ ದೇವನಿಲ್ಲೆ ಕರುಣಿಸಲಿಕ್ಕೆ
ಅಲ್ಲಿ ಅಡಗುವದೊಂದು ಬೇರೆ ಬಂತೇ ೯

ತಂದೆ ಕಣ್ತೆರೆಯೆಂದು ಭಕ್ತ ಬಳಲುತ್ತಿರಲು
ತತ್ವಮಸಿಯೆಂದುಸುರಲೇನು ಫಲವೋ
ಇಂದು ಮಾನವನಿಂಥ ಸೃಷ್ಟಿಯನು ಸೃಷ್ಟಿಸಲಿ
ಆಗದಿರಲಿಂತೆಂಬುದೇನು ಛಲವೋ ೧೦

ಯಾಕೆ ದೇವನ ಚಿಂತೆ ಯಾಕೆ ಜೀವಕೆ ಭ್ರಾಂತಿ
ಇದ್ದಷ್ಟು ದಿನ ಸುಮ್ಮೆ ಸಾಗಿರೆಂಬಾ
ಲೌಕಿಕೋಕ್ತಿಗೆ ಇಂಥ ಬೆಂಕಿಯಂಥಾ ಪ್ರಶ್ನೆ
ಹೇಗೆ ಬಗೆಹರಿದೀತು ಹೇಳು ತುಂಬಾ ೧೧

ಶಬ್ದವಿಗ್ರಹಗಳೇ ಭಕ್ತಿಭಾವಕೆ ಮೂಲ
ಮೇಲಾ ಪುರಾಣಗಳ ಗಲಭೆ ಬಹಳ
ಶಬ್ದಶ್ರವಣವೆ ವಸ್ತುಜಿಜ್ಞಾಸೆಗಾಧಾರ
ತನ್ನ ತಾ ತತ್ವ ಹೊಳೆದದ್ದು ವಿರಳ ೧೨

ಸೃಷ್ಟಿರಚನೆಯೊಳತ್ಯಗಾಧ ಜಾಣ್ಮೆಯ ಕಂಡು
ಮೇಲೆ ಮಳೆಬೆಳೆಗಳಲಿ ಕರುಣೆಗಂಡು

ಇಷ್ಟರಲಿ ಆಸ್ತಿಕ್ಯ ಗಟ್ಟಿಗೊಳುವದಯ್ಯ
ಮುಂದೆ ಹಂಬಲಿಸಿ ಹಲುಬುವುದೆ ಬಂಡು ೧೩

ಅತ್ತು ಕರೆದೂ ಕೂಡ ಬೈದು ಅಂದೂ ಕೂಡ
ದೇವರಾಯನ ಸುಳಿವು ಕಾಣದಾಗೆ
ಮತ್ತೇನು ಬದುಕಯ್ಯ ಸತ್ತಕಿಂತಾಚೆ ಸರಿ
ಇಂಥವರು ಇದ್ದರೂ ಇರದ ಹಾಗೆ ೧೪

ಈ ಕಾಲ ಕೂಟವದು ಕಾಲಕೂಟದ ವಿಷವೆ
ನೋಟ ಒಳಹೊರಗೆಲ್ಲ ಶೂನ್ಯ ಶೂನ್ಯ
ಸಾಕೆಸಾಕಾಗುವದು ಸಂಗಸಂಗಗಳಾಟ
ಇಹವು ಪರವೂ ಆಗ ತುಂಬ ಶೂನ್ಯ ೧೫

ಹೀಗೆ ನಾ ಬಾಡಿರಲು ನಿನ್ನ ಗಾಳಿಯು ಬಂತು
ಸುಳಿಗಾಳಿಗಾಗ ನಾ ಚೇತರಿಸಿದೆ
ಕೂಗಿ ಮಳೆ ಬೇಡಿದರೆ ಗಾಳಿಯಾದರು ಬಂತು
ಇಷ್ಟಾರೆ ನಾ ಧನ್ಯಧನ್ಯನೆಂದೆ ೧೬

ದೇವನಸ್ತಿತ್ವದಾ ಸ್ವಪ್ರತೀತಿಗೆ ಬೆಂದೆ
ಅದು ಸಿಕ್ಕಲಿಲ್ಲ ಸಿಗದಿರಲು ಬಿಡಲಿ
ಭಾವಭಕ್ತಿಯ ಕಂಡೆ ದಿವ್ಯ ಪ್ರೀತಿಯನುಂಡೆ
ಇದು ಕೂಡ ಇಲ್ಲದಾ ಜನ್ಮ ಸುಡಲಿ ೧೭

ನೋವಿನಿಂದತ್ತರೂ ತಾಯಿ ಮೊಲೆಯುಣಿಸಿದರೆ
ಕೂಸು ತಾನಾಗಳೇ ಮರೆವುದಲ್ಲಾ
ಯಾವ ಉರಿಯಿದ್ದರೂ ದಿವ್ಯ ಪ್ರೇಮದ ನೀರು
ಶಾಂತಗೊಳಿಸುವುದನ್ನು ಕಂಡೆವಲ್ಲಾ ೧೮

ಕರ್ತವ್ಯ ತಿಳಿಯದೇ ಕತ್ತಲೆಯ ಕಾಡಿನಲಿ
ಕಣ್ಣುಕಾಣದೆ ಹೆಜ್ಜೆ ಹಾಕುವಾಗ

ವ್ಯರ್ಥವಾದರು ಸರಿಯೆ ಸಾರ್ಥವಾದರು ಸರಿಯೆ
ಕೈಗೆ ಕೈಯಾಧಾರವೇ ಸುಯೋಗ ೧೯

ದೇವಲೀಲೆಯೊ ಕಾಣೆ ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು ೨೦

## ಮೂರನೆಯ ಮುದ್ದು

ಗೆಳೆಯರೆಂಬವರೆಲ್ಲ ದಿನದೂಟದೊಳೆ ತುತ್ತ–
ನುಳಿಸಿದರೆ ತನಗೆ ಸಾಕೆಂದು ಮೊರೆದಾ
ಗೆಳೆಯಗೀಯದ ದಿನವೆ ನನ್ನ ನಾ ತಿಳಕೊಂಡೆ
ಅಂದೆ ಕೇಳಿಸಿತೆನಗೆ ಪ್ರೇಮನಾದ ೧

ತತ್ಪೂರ್ವದಲಿ ನನಗೆ ಓದಿಗೊತ್ತಾಪ್ರೇಮ
ಕಲ್ಪನೆಯ ಚಿತ್ರವೂ ಮೂಡೆಯಿತ್ತು
ತಾತ್ಪರ್ಯವಿನ್ನೇನು ? ಕಲ್ಪನೆಯು ಬಯಲಾಗಿ
ಸತ್ಯಸ್ವರ ಆಹೊತ್ತೆ ಕೇಳಿಸಿತ್ತು ೨

ಬುದ್ಧಿಯುಳ್ಳವ ಮತ್ತೆ ಭಕ್ತಿಯುಳ್ಳವ ಮತ್ತೆ
ವೇದಶಾಸ್ತ್ರವನೋದಿದವನು ಮತ್ತೆ
ಸದ್ವಿಚಾರಿಯು ಮತ್ತೆ ಬುದ್ಧಿವಂತರ ಸಂಗ
ಇಷ್ಟಿದ್ದು ಈ ಪರಿಯೆ ಎಂದು ಅತ್ತೆ ೩

ಗೆಳೆತನದ ಬೆಲೆಯರಿತ ಗೆಳೆಯರೋಲಗದವನು
ಗೆಳೆತನದ ಗೀತಗಳ ಹಾಡಿದವನು
ಗೆಳೆಯನೊಬ್ಬನ ಹೊತ್ತಿಗಾಗಲಾರದೆ ನನ್ನ
ಒಡಲಿಗೇ ಬಡಕೊಂಡೆನೆಂಥ ನರನು ೪

ತಿಳಿದವರ ಪರಿ ಹೀಗೆ ಉಳಿದವರ ಪಾಡೇನು
ಅರಿತದ್ದು ಆಚರಣೆಗಿಳಿಸುವಲ್ಲಿ
ಕೊಳಕು ಬಣ್ಣದ ಮಾತು ಕೆಲಸಕ್ಕೆ ಬಂದೀತೆ
ತತ್ವ ಬರಿ ಬಾಯಿಮಾತೆಂದೆನಲ್ಲಿ ೫

ಹೊತ್ತುಗಳೆಯಲು ಮತ್ತೆ ಹೆಮ್ಮೆಗಳಿಸಲು ಮತ್ತೆ
ಬುದ್ಧಿ ಗೊಂದುದ್ಯೋಗವಿಲ್ಲದಿರಲು
ತತ್ವದುಪಯೋಗವಿನ್ನೇತಕೂ ಅಲ್ಲೆಂದು
ಮನವು ಮುದುಡಿತು ಜೀವನದಲ್ಲಿ ದಿಗಿಲು ೬

ಹಳೆಯ ಕತೆಗಳ ಮಾತು ಕನ್ನಡಿಯ ಹುಸಿ ಗಂಟೊ
ಮುಗಿಲ ಮಂಟಪವೊ ಕಲ್ಲಲ್ಲಿ ನಾರೋ
ಬಳಸಿ ಕಂಡವರಾರು ಬೆಳೆಸಿ ಬರೆದಿಟ್ಟಿಹರೊ
ಓದಿದವರುಂಟುಂಡು ಬಲ್ಲರಾರೋ ೭

ಮತಿಗೆ ಮಿತಿಯೇನಯ್ಯ ಬಾಯಿಗೇತರ ಬಂಧ
ಬಲ್ಲಂತೆ ಬರೆವ ಕೈಗೇನು ಕಷ್ಟ
ಕ್ಷಿತಿಯನುರುಳಿಸಬಹುದು ಬೆಳಕ ಕರಗಿಸಬಹುದು
ಮುಗಿಲ ಮುಟ್ಟುವದೇನು ಮನಕೆ ಕಷ್ಟ ೮

ಹಸುವ ನುಡಿಸಲುಬಹುದು ಹೆಣವ ಕುಣಿಸಲುಬಹುದು
ಕಲ್ಲಕಡಲೆಯ ಮೆಲ್ಲಲೇನು ಕಷ್ಟ
ಉಸುರಳಿದರೂ ಕೂಡ ಮಿಸುಕಳಿಯಲಿಲ್ಲೆಂದು
ಹೇಳುವುದು ಬಿಗಿಯೆ ತಿಳಿಯುವುದು ಕಷ್ಟ ೯

ಮನೆಯನಿತ್ತವರುಂಟು ಧನವನಿತ್ತವರುಂಟು
ಸತಿಸುತರ ಕೊಟ್ಟ ಕಥೆ ಸಾವಿರುಂಟು
ಇನುವನಿತ್ತವರುಂಟು ನಿಃಸ್ವಾರ್ಥ ಭಾವದಲಿ
ಇಂಥ ಕಥೆ ನಮ್ಮಲ್ಲಿ ಗಂಟುಗಂಟು ೧೦

ಶೂಲದಂತೆನ್ನೆದೆಗೆ ಬಾಧಿಸಿತು ಸಂದೇಹ
ಆತ್ಮ ತಾತ್ಸಾರತೆಯ ಮೊದಲೆ ಗಾಯ
ಮೇಲೆ ರಾಧೆಯ ಕಥೆಯು ಮನದಲ್ಲಿ ನಟ್ಟಿತ್ತು
ಆತ್ಮಾತ್ಮದೈಕ್ಯದಾದರ್ಶವಯ್ಯ ೧೧

ಅಂದಿನಿಂದದೆ ಧ್ಯಾನ ಅಂದಿನಿಂದದೆ ಚಿಂತೆ
ಅಂದಿನಿಂದದೆ ಮನದ ಮುಖ್ಯ ವಿಷಯ
ಅಂದಿನಿಂದದೆ ಇಂದ್ರ ಅಂದಿನಿಂದದೆ ಚಂದ್ರ
ಅಂದಿನಿಂದದೆ ನನ್ನ ಜನ್ಮಧ್ಯೇಯ ೧೨

ಇಷ್ಟು ದಿನಗಳ ಪ್ರೀತಿ ಅಷ್ಟು ತಳಕಿರಲಿಲ್ಲ
ಅಲ್ಲಿ ಭಕ್ತಿಯ ಬೆಂಕಿ ಹೊತ್ತುತ್ತಿತ್ತು
ಇಷ್ಟಕಾಗಿಯೆ ಪ್ರೀತಿ ಸ್ಪಷ್ಟ ರೂಪಕೆ ಬರದೆ
ಅಷ್ಟಷ್ಟಕೆಲ್ಲೆಲ್ಲೊ ಸುತ್ತುತಿತ್ತು ೧೩

ಪ್ರೀತಿ ರೂಪಕೆ ಬರದೆ ಭಕ್ತಿ ಫಲಿಸುವುದುಂಟೆ
ಪ್ರೇಮವಿಲ್ಲದ ಭಕ್ತಿ ಬಂಜೆಯೆಂದು
ಹೇತು ಮನದಲಿ ಮೂಡಿ ಪ್ರೀತಿಗಾಸೆಯ ಮಾಡಿ
ಹೃದಯ ಒಳಗೊಳಗೆ ಮಿಡುಕಾಡಿತಂದು ೧೪

ಆನೆಗಂಕುಶದಂತೆ ಪ್ರೀತಿ ಸ್ವಾರ್ಥಕ್ಕೆಂದೆ
ಹಾವಿಗ್ಗರುತ್ತುವ ಮೂಲಮಂತ್ರವೆಂದೆ
ಜ್ಞಾನವನು ಜಪಿಸುತ ಶುದ್ಧಿಸಲು ಸ್ವಾರ್ಥವನು
ಪ್ರೀತಿಯಂಥಾ ವಸ್ತುವಿಲ್ಲವೆಂದೆ ೧೫

ದಾನಮೂಲಕವಾಗಿ ಕ್ಷೀಣ ಸ್ವಾರ್ಥಿಗಳಾಗಿ
ಆತ್ಮಭಾವಕೆ ಬಂದರಂದಿನವರು
ಏನು ಹೇಳುವೆನಯ್ಯ ಪ್ರೇಮಮೂಲಕವಾಗಿ
ಸಾಗಿದರೆ ಸಾಗಬಹುದಿಂದಿನವರು ೧೬

ಒಂದು ಜೀವವ ಕೂಡ ತನ್ನಂತೆ ನೋಡುವುದು
ಬಂದಿಲ್ಲದಿರುವವರು ಇಂಥ ನಾವು
ಎಂದಿಗಾದರು ಸರ್ವ ಜೀವಗಳ ನೋಡೇವೆ
ಇದೆ ಒಂದೆ ನನಗಾಗ ಮನದ ನೋವು ೧೭

ನಡೆದ ಮಾತಿನ್ನೊಂದು ಒಡೆದು ಹೇಳುವೆ ತಮ್ಮ
ಇಷ್ಟರೊಳು ಸಾಧನೆಯು ಕುಂಟುಬಿತ್ತು
ಜಡದೊಳಂತರ್ಯಾಮಿ ಒಡಮೂಡದಂತಾಗೆ
ಜೀವಕೋಟಿಯ ಕಡೆಗೆ ಲಕ್ಷ್ಯಬಂತು ೧೮

ಇದ್ದದ್ದು ಬೆಳೆದೀತು ಇಲ್ಲದ್ದು ದುಸ್ಸಾಧ್ಯ
ಹೆಚ್ಚು ಪ್ರಿಯರಾರೆಂದು ಎಣಿಸಿಕೊಂಡೆ
ಇದ್ದೆಲ್ಲ ಗೆಳೆಯರಲಿ ಮುದ್ದಿನವ ನೀನೊಬ್ಬ
ಯಜ್ಞಕ್ಕೆ ನಿನ್ನನ್ನೆ ಆಯ್ದುಕೊಂಡೆ ೧೯

ದೇವಲೀಲೆಯೊ ಕಾಣೆ ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು ೨೦

## ನಾಲ್ಕನೆಯ ಮುದ್ದು

ಇಷ್ಟರೊಳಗೇ ನಿನ್ನ ಪಾತ್ರ ಸಿಂಗರಿಸಿತ್ತು
ಸತ್ಯದಾ ನಾತು ಹತ್ತಿತ್ತು ನಿನಗೆ
ಸೃಷ್ಟಿಜೀವಿಗಳಲ್ಲಿ ಸತ್ಯಲೋಪವ ಕಂಡು
ಮನದಲ್ಲಿ ಮಿಡುಕು ಹುಟ್ಟಿತ್ತು ಒಳಗೆ ೧

ಒಂದಿರುಳು ಬಂತಲ್ಲ ಅಂದು ನಾವಡವಿಯಲಿ
ಮಂದಿಮಕ್ಕಳ ರಾಜ್ಯದಿಂದ ಹೊರಗೆ

ಅಂದೆ ಮೇಲಾಗಿ ಜಿನಮುನಿಯನ್ನು ಕಂಡಿದ್ದೆ–
ವಚ್ಚ ಬತ್ತಲೆಯಾತ್ಮ ಒಳಗೆ ಹೊರಗೆ ೨

ಅಕ್ಷಯದಾಕಾಶ ಎಚ್ಚರಿಸುವಾ ಗಾಳಿ
ಆದ್ಯಂತವಿಲ್ಲದಾಕಾಶವಿತ್ತು
ಸಾಕ್ಷಿಯಂಥಾ ರಾತ್ರಿ ಸುತ್ತು ಸಂದಣಿಸಿತ್ತು
ನಗುನಗುವ ಚಿಕ್ಕೆಗಳ ಬಳಗವಿತ್ತು ೩

"ಹೊಚ್ಚಹೊಸ ದಿನದಲ್ಲಿ ಮೊಟ್ಟಮೊದಲಿನ ಮುದ್ದಿ–
ಗಾರು ಮುಂದರಿಯಬೇಕಿಬ್ಬರೊಳಗೆ
ಅಚ್ಚ ದಂಪತಿಗಳಲಿ ?" ಅಂತುಯಿಂತೂ ಒಮ್ಮೆ
ಅಂತರಂಗದ ಆಸೆ ಬಂತು ಹೊರಗೆ ೪

ಆಗ ಏನಾನಂದ ಆಗ ಎಂಥಾ ಸಮತೆ
ಆಗಿನದ್ಭುತ ಲೀಲೆ ಹೇಳಲಳವೇ
ಆಗಲಾರದ್ದಾಯ್ತು ಆಡಲರಿಯದ್ದಾಯ್ತು
ಮೈಯ ತೆರೆ ಹಾರಿ ಬರಿ ಆತ್ಮದ್ದೊಳವೇ ೫

ಅಂದಿನುತ್ಕಟ ದೈನ್ಯ ತಿರುಗಿ ಸ್ಥಿರವಾಯಿತ್ತು
ಒಂದು ವರ್ಷದ ತಪದ ಸಿದ್ಧಿಯಿಂದ
ಮುಂದಿನದ್ಭುತ ಕಥೆಯ ಜೀವಾತ್ಮಗಳ ಯುದ್ಧ
ನಡುವಿನಾ ಬಿರುಗಾಳಿ ನೋಡೊ ಕಂದಾ ೬

ತಾನೆತಾನಿದ್ದಾಗ ಕುಣಿಯದಾತ್ಮದ ದೀಪ
ಜೀವದಾ ಗಾಳಿ ತುಸು ತಾಕೆ ಸಾಕು
ಏನು ಹೇಳುವೆನಯ್ಯ ಆತ್ಮ ಹೊಯ್ದಾಡುತಿರ–
ಲೊಮ್ಮೆ ಬೆಳಕೊಮ್ಮೆ ಕತ್ತಲೆಯ ಜೀಕು ೭

ಜೀವದ ಪತಂಗ ತಾನಾತ್ಮ ದೀಪದ ಮೇಲೆ
ಅಬ್ಬರಿಸಿ ಆವರಿಸಿದಾಗ ಮಬ್ಬು
ಕಾವಿನಲಿ ಬೆಂದೋಡಿ ಆತ್ಮಜಯವಾದಾಗ
ನೆಲಮುಗಿಲ ತೇಲಿಸುವ ಬೆಳಕಿನುಬ್ಬು ೮

ಆಗ ಎಂಥಾ ನಿರಾಶೆ ಆಗ ಎಂಥಾ ದುಃಖ
ಆಗ ಎಂಥಾ ಕಷ್ಟ ಚೂರುಚೂರೇ
ಆಗಿನಂಥಾ ವ್ಯರ್ಥದನಿಸಿಕೆಯ ನೆನೆಸಿದರೆ
ಈಗಲೂ ಹೃದಯಕ್ಕೆ ಘೋರುಘೋರೇ ೯

ಹೀಗಿರುವ ಹೊತ್ತಿನೊಳೆ ಹೊಟ್ಟೆಯನು ಬಿಚ್ಚಿ ಮಾ–
ತಾಡಿದರೆ ಬಂದಥ ಮೋಡ ಬಯಲೇ
ಆಗ ಏನಾನಂದ ಆಗ ಎಂಥಾ ಸಮತೆ
ಹೇಳಲೇನಾಗಿನದ್ಭುತದ ಲೀಲೆ ೧೦

ಮುಚ್ಚಿರುವ ಮೊಗ್ಗೆ ತಾನರಳಿದರೆ ಕೋಮಲವು
ಆಗ ನಸುಬಿಸಿ ಕೂಡ ಬಾಡಿಸುವದು
ಹದಗೆಟ್ಟು ಕುಗ್ಗಿ ಬಗ್ಗಿದ ಹೊತ್ತಿನಲಿ ಕೂಡ
ನಸುಗಾಳಿ ಬಂದು ನಗಿಸಾಡಿಸುವದು ೧೧

ಬಂದ ರಾತ್ರಿಯು ಕಳೆದು ಅಂದು ಹಗಲಾದೊಡನೆ
ಹಿಗ್ಗುತಿದ್ದೆವು ಪೀಡೆ ಹೋಯಿತೆಂದು
ಮುಂದೆ ತುಸು ಹೊತ್ತಿನೊಳೆ ಕಾಳರಾತ್ರಿಯ ಕಾಟ
ಎಲ್ಲಿಂದಲೋ ಮುಸುಕುತಿತ್ತು ಬಂದು ೧೨

ಮತ್ತೆ ಮುಂಚಿನ ಗೋಳೆ ಬೀಸಿದ್ದೆ ಬೀಸುವುದು
ಬುದ್ಧಿಗೇ ಬಿಚ್ಚದಂತಾಗುತಿತ್ತು
ಅತ್ತು ತೆಕ್ಕೆಗೆ ತೆಕ್ಕೆಬಿದ್ದು ಒಳನೋಡುತಿರೆ
ಕತ್ತಲೆಯು ಹರಿದು ಬೆಳಕಾಗುತಿತ್ತು ೧೩

ಒಂದು ದಿನವೇ ಹೀಗೆ ಎರಡು ದಿನವೇ ಹೀಗೆ
ವರುಷದಿನ ಮುಳುಮುಳುಗಿ ಎದ್ದಮೇಲೆ
ಅಂಧಕದ ಕಡಲಲ್ಲೆ ರತ್ನರಾಶಿಯ ಕಂಡು
ಎಂದಿಗಳಿಯದ ನಿಧಿಯ ಗಳಿಸಲಿಲ್ಲೇ ೧೪

ಆತ್ಮಸೂರ್ಯನ ಮುಂದೆ ಜೀವಪೃಥ್ವಿಯು ತಿರುಗಿ
ಸಾಗುತಿರುವನಕ ಹಗಲಿರುಳು ಬಿಡದು
ಆತ್ಮಕ್ಕೆ ಜೀವಭಾವದ ಸೋಂಕು ಬಿಡದನಕ
ಬುದ್ಧಿಭೇದದ ತಾಯಿಬೇರು ಸುಡದು ೧೫

ಮನದ ಮಾತನ್ನೆಲ್ಲ ಬಿಚ್ಚಿ ಬಾಯಿಗೆ ಬಿಡದು
ಜೀವಕ್ಕೆ ಇದುವೊಂದು ಭವದ ಗುಣವು
ಅನಿಸಿದಷ್ಟೂ ಮಾತು ಎಣಿಸಿ ಹೇಳಲು ಬರದು
ಬುದ್ಧಿಗಿದು ಎಂದಿಗೂ ಕುಂಟುತನವು ೧೬

ಹೇಳಿದ್ದು ಹೇಳಿದಂತರಿತುಕೊಳ್ಳದ್ದೊಂದು
ಭ್ರಾಂತ ಚಿತ್ತಕ್ಕೆ ಬೆನ್‌ಬಿಡದ ಗುಣವು
ಕೇಳಲೇನಯ್ಯ ಸಂದೇಹ–ಸೂತಕವಿಲ್ಲೆ
ಇದೆ ಬುದ್ಧಿಭೇದಕ್ಕೆ ಮೂಲಧನವು ೧೭

ಸತ್ಯವಿದ್ದೆಡೆ ಪ್ರೀತಿ ಪ್ರೀತಿಯಿದ್ದೆಡೆ ಸತ್ಯ
ಸತಿಪತಿಗಳಂತೆ ಇವು ತಳಕುಮಳಕೋ
ಸತ್ತಲ್ಲದುಳಿಯವೈ ಒಂದನೊಂದಗಲಿದರೆ
ಆತ್ಮಲೋಕಕ್ಕೆ ಇವು ಬೆಂಕಿ ಬೆಳಕೋ ೧೮

ಹೊರಗೆ ತಮ್ಮಮನ ಕೂಡಿ ಹಲವು ದಿನವಾಗಿತ್ತು
ಆತ್ಮಾತ್ಮಗಳ ಮುಖವು ಕೂಡಿತೀಗೆ
ಒರತೆಯಾ ನೀರಿಗೂ ಕರುಕೆಯಾ ಬೇರಿಗೂ
ಮೇಳು ಕೂಡಿತು ನನಗೆ ನಿನಗೆ ಹೀಗೆ ೧೯

ದೇವಲೀಲೆಯೊ ಕಾಣೆ ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು ೨೦

## ಐದನೆಯ ಮುದ್ದು

ನಿನ್ನ ತುಟಿಯೇನು ಸವಿ ನಿನ್ನ ಸೋಂಕೇನು ಸುಖ
ಅಹಾ, ನಿನ್ನ ತಲೆಯೇನು ಕಂಪೋ
ನಿನ್ನ ಮುಖ ಬಲು ಚೆಲುವು ಬಣ್ಣಿಸಲು ಬಾರದ್ದು
ಕಿವಿಗೆ ಹಾ ನಿನ್ನ ದನಿಯೇನು ಇಂಪೋ ೧

ತುಟಿಗೆ ತುಟಿಹಚ್ಚಿ ನಾವಾತ್ಮರುಚಿನೋಡಿದೆವು
ಎದೆಗೆ ಎದೆ ಹಚ್ಚಿ ತೆರೆಹಾರಿಸಿದೆವು
ಗುಟುಗುಟುಕು ಹೀರಿದೆವು ತಲೆಯ ಕಮಲದ ಗಂಧ
ನೋಡನೋಡುತೆ ಕಾಲ ಖಂಡಿಸಿದೆವು ೨

ಒಬ್ಬರೊಬ್ಬರ ದನಿಯು ಕಿವಿಗೆ ಬಿದ್ದಾಗಲೇ
ಸೂರ್ಯ–ಚಂದ್ರರ ಹಾಡು ಕೇಳಿಸಿತ್ತು
ಅಬ್ಬಬ್ಬ ಏಸೊ ದಿನ ಸಾಗಿಸಾಗಿಯು ಕೂಡ
ಆಸರಿಕೆ ಬೇಸರಿಕೆ ತೋರದಿತ್ತು ೩

ಮನದೊಳಗೆ ನಿನ್ನ ನೆನಪಾದರಾಕ್ಷಣದೊಳಗೆ
ಮುಗಿಲೊಳಗೆ ಎಳೆಚಂದ್ರ ಮೂಡಿದಂತೆ
ಬನದೊಳಗೆ ಕೇರಳದ ಕೋಗಿಲೆಯ ದನಿಯಂತೆ
ಗರಿ ಬಿಚ್ಚಿ ಗಂಡುನವಿಲಾಡಿದಂತೆ ೪

ನಿನ್ನ ನುಡಿಯೂ ಮಧುರ ನಿನ್ನ ನಡೆಯೂ ಮಧುರ
ನಿನ್ನ ಸೆಡವೂ ಮಧುರ ಸರ್ವ ಮಧುರ
ನಿನ್ನ ಮುನಿಸೂ ಮಧುರ ನಿನ್ನ ಕನಸೂ ಮಧುರ
ನಿನ್ನದೆಲ್ಲಾ ನನಗೆ ಮಧುರ ಮಧುರ ೫

ಅರಗಳಿಗೆ ಅಗಲಿಲ್ಲ ಅಗಲಿದ್ದು ಗೊತ್ತಿಲ್ಲ
ಅಗಲಿದರೆ ಕಣ್ಣು ಕಿವಿ ಮನಸು ಅತ್ತೇ
ಹೊರಗೊಳಗೆ ಸೊಗಸಿಲ್ಲ ಹೊರಗಿನೆಚ್ಚರವಿಲ್ಲ
ಒಂದು ಕೇಳಿದರೊಂದು ಮಾತು ಮತ್ತೆ ೬

ಮನೆಯ ಮುಟ್ಟಿರಬಹುದು ಮಾತು ಮುಗಿದಿರಬಹುದು
ಮರಳಿ ಹೊರಟಿರಬಹುದು ಎಂದೆಣಿಸುತಾ
ಸನಿಯೆ ಬಂದಿರಬಹುದು ಎಂದೆನಿಸಿ ನೋಡಿ ಹಾ !
ಕಾಣದಿರೆ ಹೊಸ ಲೆಕ್ಕವನು ಗುಣಿಸುತಾ ೭

ಗಾಳಿಧೂಳಿಯ ಸುಳಿಗೆ ಕಾಲಸಪ್ಪಳೊ ಎಂದೆ
ಹಕ್ಕಿಪಕ್ಕಿಗಳುಲಿಗೆ ರಾಗವೆಂದೆ
ಕಾಳುಕಡಿಯಾರಿಸುವ ಗುಬ್ಬಿ ತಾ ಹಾರಿದರೆ
ನೀ ಬಂದೆಯೆಂದು ನಾನೆದ್ದು ನಿಂದೆ ೮

“ತರಗೆಲೆಯು ಸರಕೆನಲು ಹೊರಗೆ ನಾನಾಲಿಸುವೆ
ಬರವಿಲ್ಲದಿರೆ ಮನದಿ ಸೊಪ್ಪುಗರೆವೆ”
ನರೆಬಂದ ಮುಪ್ಪಿನ ಷಡಕ್ಷರಿಯನೂ ಬಿಡದ
ಮಧುರ ಸಂಧಾನಕ್ಕೆ ಬೆರಗುಬಡುವೆ ೯

ಸನಿಬಂದು ಮುಖವನರಳಿಸಿ ತುಟಿಯ ಬಿಚ್ಚಿದರೆ
ಒಳಗೆ ಹೊರಗೆಲ್ಲವೂ ಒಪ್ಪು ಒಪ್ಪೇ
ಮನವು ಮುದುಡಿರುವಾಗ ಮೈದಡವಿದರೆ ಸಾಕು
ಕದಡಿದ್ದ ಕೊಳವೆಲ್ಲ ತಿಳಿಯ ತುಪ್ಪೇ ೧೦

“ವದಸಿ ಯದಿ ಕಿಂಚಿದಪಿದಂತರುಚಿಕೌಮುದೀ
ಹರತುದರ ತಿಮಿರಘೋರಂ” ಸಂಘೋರಂ
ಸುದತಿ ಪದ್ಮಾವತಿಯ ಚರಣಚಾರಣ ಚಕ್ರ–
ವರ್ತಿ ಜಯದೇವನನುಭವದ ಸಾರಂ ೧೧

ಇಲ್ಲಿ ಮಾತಿನ್ನೊಂದ ಹೇಳಬೇಕೆಂದರೆ–
ಲ್ಲೆಲ್ಲಿಯೂ ಈ ಜೀವ ಕೇಳದಲ್ಲ
ನಲ್ಲೆ ವಾಸಂತಿ ತಾ ಜೀವದಾ ಜೊತೆಗಾರ್ತಿ
ಮೂವರೂ ಅಗಲದಾ ಪಥಿಕರಲ್ಲ ೧೨

ಬೆಳದಿಂಗಳಿರುಳಲ್ಲಿ ನಟ್ಟನಡುರಾತ್ರಿಯಲಿ
ಸಪ್ಪಳಿಲ್ಲದ ಶಾಂತ ಸೃಷ್ಟಿಯಲ್ಲಿ
ಬಿಳಿಯ ಟೀವಕ್ಕಿ ಮಾತಾಡುತ್ತ ಹೊರಟಂತೆ
ನಾವಾತ್ಮಯಾತ್ರಿಕರನಂತದಲ್ಲಿ ೧೩

ಪ್ರೇಮವನು ಬಲೆಹಾಕಿ ಹಿಡಿದುಕೊಂಡೆವು ನಾವು
ಕಾಮುಕರಿಗಿಂತಲೂ ಕಾಮಿಯಾಗಿ
ಭೂಮಿಯವರೊಳಗಿದೇ ಕರ್ಮಸಿದ್ಧಿಯ ಮರ್ಮ
ಹೆಚ್ಚೇನು ಹೇಳಿವೆನೊ ತಿರುಗಿಮುರುಗಿ ೧೪

ಪರಿಪರಿಯ ಕಷ್ಟದಲಿ ಹೊರಳುವವರೂ ಕೂಡ
ಇರುವುದಕ್ಕೇ ಆಸೆಮಾಡುತಿರಲು
ಇರವಿನಾನಂದದಲಿ ಸರಿಜೋಡಿ ಕೂಡಿದರೆ
ಇರುವಿನಷ್ಟಾದರೂ ಹಿಗ್ಗು ಮಿಗಿಲು ೧೫

ಅನ್ನಬಹುದೇನಯ್ಯ ಹಾಡು ಮುಗಿಯಿತ್ತೆಂದು
ಜನ್ಮದಾಕಾಶದಲ್ಲದರ ಬೇರು
“ಕನ್ನಡಿಯೊಳೆಷ್ಟು ಕಂಡೀತೊ ಕನಕಾಚಲವು
ಕೊಡಕೆ ಹಿಡಿಸೀತೆಷ್ಟೊ ಕಡಲ ನೀರು” ೧೬

ಹುಚ್ಚುತನವೋ ಕಾಣೆ ಜಾಣತನವೋ ಕಾಣೆ
ಹುಚ್ಚುತನ ಯಾರಿಗೂ ಬಿಟ್ಟೆಯಿಲ್ಲ
ಅಚ್ಚ ಅನುಭವರಾಶಿ ಬಿಚ್ಚಿ ಬೈಲಿಗೆ ಇಟ್ಟೆ
ಮುಚ್ಚುಮರೆಯಿದರೊಳೇನೇನು ಇಲ್ಲ ೧೭

ಈ ಹುಚ್ಚಿಗಳ ಕೇಕೆಯಿದ್ದಂತೆ ಹಾಡಿದೆನು
ನನ್ನಂತರಂಗದಾ ಪ್ರಕೃತಿಯಂತೆ
ಹೋಹೊ "ಸದೃಶಂ ಚೇಷ್ಟತೆ ಜ್ಞಾನವಾನಪಿ ತು
ಸ್ವಸ್ಯಾಃ ಪ್ರಕೃತೆ" ಯೆಂಬ ಗೀತೆಯಂತೆ ೧೮

ಕರ್ಮ ಮರ್ಮದ ನೆಲೆಯ ಅರಿತವರಿಗೂ ಅರಿದು
ನಾನು ನೀನಾವ ತಕ್ಕಡಿಯ ಕಾಣಿ
"ಕರ್ಮಣ್ಯ ಕರ್ಮಯಃ ಪಶ್ಯೇದ ಕರ್ಮಣಿ ಚ
ಕರ್ಮಯಃ ಪಶ್ಯೇತ್ ಸಬುದ್ಧಿಮಾನ್ಹೀ" ೧೯

ಜನರಾಡಿಕೊಳಬಹುದು ನನಗು ನಿನಗೂ ಕೂಡೆ
ಅವರೇನು ಬಲ್ಲರೋ ಒಳನಿಧಾನ
ನನಗೆ ನೀನತಿ ಮಧುರ ನಿನಗೆ ನಾ ಬಲು ಚೆನ್ನ
ಹೀಗೆಂತಲೇ ನಾವು "ಮಧುರಚೆನ್ನ" ೨೦

ದೇವಲೀಲೆಯೊ ಕಾಣೆ ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು
ಯಾವುದೇನೇ ಇರಲಿ ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ ಮನಗಂಡ ಮಾತು ೧೦೧

———

## ೧೬. ಶ್ರುತಾಶ್ರುತ ವೀಣಾರವ

(೧)

ಮಿಂಚಿನಂದದಿ ಹೊಳೆದು ಹರಿಯುವವಳಾರೆ ?
ಚಂಚಲೆಯೆ ! ಚಲಮಲನೆ ಚರಿಸುವವಳಾರೆ ? ?
ಮೈಯಿಲ್ಲದವಳೇ ! ನೀ ಮೈದೋರಿದಂದು
ಮೈಮರೆಯಿತೀ ಜಗವು ನಿನ್ನಲ್ಲಿ ಸಂದು ! ! !
ನಿಂತಲ್ಲಿ ನಿಲ್ಲುವುದ ನೀನರಿಯದವಳು !
ನಿಂತಲ್ಲಿಯೇ ನೆಲವ ನಿಲಿಸಬಲ್ಲವಳು ! ! !
ಸಪ್ತಭಂಗಿಗಳಿಂದ ಸುಳಿದಾಡುವವಳು
ಸುಪ್ತಿಯಲಿ ಸರ್ವವನು ಸೆರೆಹಿಡಿಯುವವಳು ! !
ಮೂಗೆಯೆಂಬೆನೆ ಮೆಚ್ಚಿ ಮಾತಾಡುವವಳು !
ಮೂಗುವಡಿಸುವಿ ನುಡಿಯ ! ನೀನದೇಂಥವಳು ! !
ಯಾವ ದೇಶದ ಹೆಣ್ಣೆ ! ಯಾವ ಭಾಷೆಯಿದು ?
ಅಕ್ಷರಕ್ಕಿದು ತಾನೆ ಸಾಕ್ಷಿಯಾಗಿಹುದು ! ! !
ನಿನ್ನನೆಲ್ಲಿಯೋ ಎಂದೋ–ನೋಡಿದಂತಿಹುದು
ನಿನ್ನ ನುಡಿಯಲ್ಲೊಮ್ಮೆ ಆಡಿದಂತಿಹುದು ! ! !
ಕೇಳುತಿರುವಂತೆಯೇ ತಿಳಿಯುವಂತಿಹುದು
ಹೇಳಲೆಳಸುತ್ತಲೇ ತಿಳಿಯದಂತಿಹುದು ! !
ಸಪ್ತ ಋಷಿಗಳ ಮಂತ್ರ ಸೂಸಿ ಹರಿಯುವದು
ಸಪ್ತ ಭೂಮಿಕೆಗಳನು ಸುತ್ತಿಸುಳಿಯುವದು ! ! !

* * * *

ಆಪ್ತಳಂದದಿ ನಿನ್ನ ಮರೆಗಿರುವವಳಾರು ?
ಗುಪ್ತಗಾಮಿನಿಯಾಗಿ ಚರಿಸುವವಳಾರು ?
ನಿನ್ನ ಮೋರೆಯ ಮೇಲೆ ಅವಳ ಕುರುಪಿಹುದು !
ನಿನ್ನ ನೋಡಿದ ಮನಕೆ ಅವಳ ನೆನಪಿಹುದು ! !
ಅವಳ ಬಣ್ಣಿಸಬಲ್ಲ ಬಾಯಿ ನನಗಿಲ್ಲ

ಅವಳ ಬಿಟ್ಟಿರಬಲ್ಲ ಶಕ್ತಿ ನನಗಿಲ್ಲ ! !
ನೀನವಳ ಬಹಿರಂಗ ! ಅವಳಂತರಂಗ ! !
ತಾನಿರುವನವಳಂತರಂಗದಲಿ–'ರಂಗ ! !'

* * * *

(೨)

'ಕಾಣದ ಕಂಚಿನ ಗೌರಿಯನು
ಕಾಣುವ ಕಣ್ಣೆಮಗುಂಟೇನು ? ?'
"ಕಾಣದ ಕಂಚಿನ ಗೌರಿಯನು
ಕಾಣುವ ಕಣ್ಣೆಮಗಿಲ್ಲೇನು ! ! !"
ಕಾಣುವ ಕಣ್ಣಿಗೆ ಕಾಣಿಸಳು
ಕಾಣದ ಕಣ್ಣಿಗೆ ಕಾಣುವಳು !
ಕಾಣಿಸದಾಗಲು ಕಾಣುವದು
ಕಾಣದುದಾಗಳೆ ಕಾಣುವದು ! !
ಕಾಣುವದೆಲ್ಲಾ ಸವಿಗನಸು !
ಕಾಣದುದದು ಕನಸಿನ ಕನಸು ! !
ಮೀನಿನ ಹೆಜ್ಜೆಯ ಗೆರೆಯಂತೆ
ಕಾಣುವ ಕನಸಿನ ಸವಿ ಅಂತೆ ! !

* * * *

ಕಂಡೂ ಕಾಣದಹಾಗಿಹೆನು !
ಉಂಡೂ ಊಡದಹಾಗಿಹೆನು !
ಕಂಡೂ ಬಣ್ಣಿಸಲಳವಿಲ್ಲ ! !
ಉಂಡೂ ಉಣಿಸಿನ ನೆನಹಿಲ್ಲ ! ! !
ತುದಿನಾಲಿಗೆಯಲಿ ತುಳುಕುವದು
ಎದೆಯಲ್ಲದುವೇ ತುಂಬಿಹುದು !
ಎದೆಯಿಂದೆದ್ದುಕ್ಕೇರುವದು !
ತುದಿನಾಲಿಗೆಯಲಿ ತಟ್ಟುವದು ! !
ಬಾಯಿಗೆ ಬಂದಲೆದಾಡುವದು

ಹಾಯದು ಮುಚ್ಚಿದ ತುಟಿದೆರೆದು !
ಲೇಖನಿಯಲಿ ಹರಿದಾಡುವದು
ಸೋಂಕಲೆ ಒಲ್ಲದು ಪಟವನಿದು ! !

*     *     *     *

ಚೆಲುವಿಗೆ ಚೆಲುವಿಕೆ ಕೊಟ್ಟವಳು
ಚೆಲುವಿನ ಬಲವನು ಹೆತ್ತವಳು !
ಸವಿಗೂ ಸವಿಯನು ಸುರಿದವಳು !
ಕವಿಗೂ–ತಾ ಕವಿಯಾಗಿಹಳು ! ! !
ಅಕ್ಷಿಯ ಮಿಟುಕಿಸಿ ವಿಶ್ವದೊಳು
ಅಕ್ಷರಕುಲವನು ಹಡೆದವಳು !
ಅಕ್ಷರವಿಲ್ಲದ ಭಾಷೆಯೊಳು
ಸಚ್ಚಳ ಕವಿತೆಯ ಹಾಡುವಳು ! ! !
'ಆ' ಹಾಡಿನ ಸವಿಸುಳಿಗಳನು
'ಈ' ಹಾಡಿನೊಳೆಂತಿಳಿಸುವೆನು ?
ತುದಿಮೊದಲಿಲ್ಲದ ಗೀತವದು
ಹುದುಗಿಸ ಹೋಗಲು ಹಿರಿದಹುದು !

———————

## ೧೭. ಸುಖ–ದುಃಖ

ಸುಖವು ಬೀದಿಯ ನೆರಳ । ದುಃಖವು ದೂಡುವ ಬಿಸಿಲ
ಸುಖ–ದುಃಖ ನಮಗ ಸರಿಸವನ । ತಂಗೆಮ್ಮಾ
ಒಂದುಬಿಟ್ಟೊಂದು ದೊರಿಯಾವ ೧

ಸುಖಕ ಮರುಳಾದೀವ । ದುಃಖಕ ಬ್ಯಾಸತ್ತೀವ
ಸುಖ ಬೇಡಿ ಮನವು ಮಲಮಲ । ತಂಗೆಮ್ಮಾ
ದುಃಖ ನೋಡಿ ಜೀವ ಗಲಬಲ ೨

ಸುಖವಂತ ಹಿಡಿದೀವ । ದುಃಖವಾಗಿ ಪಡೆದೀವ
ಹೂವಲ್ಲ ಜಾಣಿ ಹುಳ ನೋಡ । ತಂಗೆಮ್ಮಾ
ಬೆಳದಿಂಗಳಲ್ಲ ಉರಿಬಿಸಿಲ ೩

ಮುತ್ತಂತ ಮುಟ್ಟೀವ । ಕಿಡಿಯಾಗಿ ಕಚ್ಚ್ಯಾವ
ಹಣ್ಣಲ್ಲ ಜಾಣಿ ಹಿಡಿಗೆಂಡ । ತಂಗೆಮ್ಮಾ
ಬಳ್ಳೆಲ್ಲ ಬಿಗಿದ ಬಲಿ ನೋಡ ೪

ನೆಲವಂತ ನಿಂತೀವ । ನೀರಾಗಿ ನುಂಗೀತ
ಬೆಣ್ಯಲ್ಲ ಜಾಣಿ ಬಿಳಿ ಸುಣ್ಣ । ತಂಗೆಮ್ಮಾ
ಪರಿಮಳವಲ್ಲ ವಿಷಗಾಳಿ ೫

ಜಪ್ಪೀಸಿ ನಡಿದೀವ । ತಪ್ಪೀಸಿ ಒಯ್ದೀತ
ನಿಂತನಿಂತಲ್ಲೆ ನುಂಗೀತ । ತಂಗೆಮ್ಮಾ
ಬಲ್ಲಂದ ದಿಕ್ಕಿಗೆಳಸೀತ ೬

ತಪ್ಪೀಸಿ ನಡಿದೀವ । ಜಪ್ಪೀಸಿ ಹಿಡಿದೀತ
ಜಾರಟಿಗೆ ಕಾಲ ಜಾರೀತ । ತಂಗೆಮ್ಮಾ
ಹಾರಟಿಗೆ ರೆಕ್ಕಿ ಮುರಿದೀತ ೭

ಹೊಳಿಬೀಳ ಹೋದೀವ । ಹೊಳಿ ಸರಿದು ಇಳಿದೀತ
ಹೊಳಿ ನಮಗ ಹಾಸನೆಲವಾಯ್ತು । ತಂಗೆಮ್ಮಾ
ಬ್ಯಾಗೀಯ ಬೆಂಕಿ ಬೂದ್ಯಾಯ್ತು ೮

ದರಿಹಾರ ಹೋದೀವ । ಮರಬಳ್ಳಿ ತೊಡಕೀತ
ಕಮರೀಯ ಕೊಳ್ಳ ಉಡಿಯಾಯ್ತು । ತಂಗೆಮ್ಮಾ
ಬೇತಾಳ ಬಾಯಿ ಮುಚ್ಚೀತ ೯

ಹುತ್ತಾನೆ ತಟ್ಟೀವ । ಹಾವಾನ ಮೆಟ್ಟೀವ
ಹೆಡಿ ಬಜ್ಜಿ ಮಡಿದ ಮಿಡಿನಾಗ । ತಂಗೆಮ್ಮಾ
ನುಂಗೀದ ವಿಷವ ಕಕ್ಕೀತ ೧೦

ಗವಿ ಕಂಡು ಹೊಕ್ಕೀವ । ಹೆಬ್ಬುಲಿಯ ಕೆಣಕೀವ
ಹುಲಿ ನಮಗ ಹೋರಿಗರುವಾಯ್ತು । ತಂಗೆಮ್ಮಾ
ಮರಣಾವು ಮಟ್ಟಮರೆಯಾಯ್ತು ೧೧

ಹೌಹಾರಿ ಹೋದೀವ । ಹುಚ್ಚಾಗಿ ನಿಂತೀವ
ಮುಂದೀನ ಹಾದಿ ಮಂಜಾನ । ತಂಗೆಮ್ಮಾ
ಹಿಂದೆ ಹೈರಾಣದಾರ್‍ಯಾಣ ೧೨

ಏನಂತ ಮಾಡೂನ । ಏನಂತ ಬಿಡವೂನ
ಹಿಂದಿಲ್ಲ ನಮಗ ಮುಂದಿಲ್ಲ । ತಂಗೆಮ್ಮಾ
ಸವಿಯಿಲ್ಲ ಮುಂದ ಸುಖವಿಲ್ಲ ೧೩

ಮಾಡೀದ ಹಂಚೀಕಿ । ನೋಡಟಿಗೆ ಮುರಿದಾವ
ನುಗಿಸಿದರು ಹರಣ ಹೋಗಾದ । ತಂಗೆಮ್ಮಾ
ತಟ್ಟಿದರು ಬೆಂಕಿ ಮುಟ್ಟಾದ ೧೪

ಏರೇರಿ ಹೋದೀವ । ಹಾರ್‍ಹ್ಯಾರಿ ಹೋದೀತ
ಬೆನ್ಹತ್ತಿ ಬ್ಯಾಸರಾದೀತ । ತಂಗೆಮ್ಮಾ
ಹಿಡಿಹಿಡಿದು ಸೋತುಬಿಟ್ಟೀವ ೧೫

ನಿಂತಲ್ಲೆ ನಿಂತೀವ । ಕುಂತಲ್ಲೆ ಕುಂತೀವ
ದಣಿವೀಕಿಗಳಿದು ಎದ್ದೀವ । ತಂಗೆಮ್ಮಾ
ದುರಗುಟ್ಟಿ ದಿಕ್ಕ ನೋಡೀವ ೧೬

ಆರ್‍ಯಾಣದಡವ್ಯಾಗ । ಯಾರ್‍ಯಾರ ಸುಳವಿಲ್ಲ
ಎಲ್ಲೀದು ಬಂತು ಹಿರಿಹರಕಿ । ತಂಗೆಮ್ಮಾ
ಒಳಹೊರಗ ನಮಗ ಹಿರಿಹಿಗ್ಗ ೧೭

ಮೂರ್ಹೆಜ್ಜಿ ದಾಟಿದರ । ಮುಂದಲ್ಲೆ ಗುಡಿಸಲವ
ಅಲ್ಲಿ ಮುನಿಗೋಳ ಅರಸೊತಿಗೆ । ತಂಗೆಮ್ಮಾ
ಅವರಂಥ ಸುಖವ ಅರಸರಿಯ ೧೮

ನಮ್ಮಂಗೆ ಅತ್ತವರು । ನಮ್ಮಂಗೆ ಕರೆದವರು
ನಮ್ಮಂಗೆ ಬಾಡಿ ಬೆಂದವರು । ತಂಗೆಮ್ಮಾ
ಕಡಿಗೊಮ್ಮೆ ಗಟ್ಟಿಗೊಂಡವರು ೧೯

ಊರಿದ್ದೆ ಊರಾಯ್ತು । ನಿಂತದ್ದೆ ನೆಲೆಯಾಯ್ತು
ಅಂದದ್ದೆ ವೇದಋುಚಿಯಾಯ್ತು । ತಂಗೆಮ್ಮಾ
ಬಂದದ್ದೆ ಹರಕೆ ಹಿರಿದರಾಯ್ತು ೨೦

ಹರಿದದ್ದೆ ಹಳ್ಳಮ್ಮಾ । ನಿಂತದ್ದೆ ತೀರ್ಥಮ್ಮಾ
ಆ ನೀರ ಮತ್ತ ಈ ನೀರ । ಬ್ಯಾರಿಲ್ಲ
ತಿಳಿಬೇಕ ತಂಗಿ ಹೊಳಿಬೇಕ ೨೧

ಬೇಡೂತ ನಡದಾಂಗ । ಕಾಡೂತ ಹೋದೀತ
ಬೇಡೂದು ಮರೆತ ಘಳಿಗ್ಯಾಗ । ತಂಗೆಮ್ಮಾ
ಆಡೂತ ಓಡಿ ಬಂದೀತ ೨೨

ಸುಖವು ಬೀದಿಯ ನೆರಳ । ದುಃಖವು ದೂಡುವ ಬಿಸಿಲ
ಸುಖ–ದುಃಖ ನಮಗ ಸರಿಸವನ । ತಂಗೆಮ್ಮಾ
ಒಂದುಬಿಟ್ಟೊಂದು ದೊರಿಯಾವ ೨೩

―――――

## ೧೮. ರೋಹಿಣಿ

ಬಾರೇ ಗೆಳತಿ
ಒಳಗೇ ಕುಳಿತಿ
ಅಟ್ಟಾ ಏರಿ
ಮೇಲೆ ನಿಂತಿ
ಕದಾಗಿದಾ ನೂಕಿಕೊಂಡು
ಚಿಲಕಾಗಿಲಕಾ ಹಾಕಿಕೊಂಡು
ಅಲ್ಲೇ ಕುಳಿತಿ
ಬಾರೇ ಗೆಳತಿ ೧

ಬಾರೇ ಜಾಣಿ
ಮಿಂಚಿನ ರಾಣಿ
ಅಪ್ಸರ ನಾರಿ
ಮೈ ಜರತಾರಿ
ಥಾಟಮಾಟ ಮಾಡಿಕೋತ
ಆಟಪಾಟ ಆಡಿಕೋತ
ಅಲ್ಲೇ ಕುಳಿತಿ
ಬಾರೇ ಗೆಳತಿ ೨

ಮುಗಿಲಾಗ್ ಹೊಳೆದಿ
ಮೇಲೆ ಇಳಿದಿ
ಒಳಗೇ ಉಳಿದಿ
ಅಲ್ಲೇ ಸುಳಿದಿ
ಏನೋ ಎಂತೋ ನೋಡಿಕೋತ
ತರನಾ ತರಲಾ ಹಾಡಿಕೋತ
ಅಲ್ಲೇ ಕುಳಿತಿ
ಬಾರೇ ಗೆಳತಿ ೩

ಎಂದೀಗೊಮ್ಮೆ
ಹಾಕುತ ಹಣಕಿ
ಮಾರೀ ತೋರಿ
ತುಸುತುಸು ಇಣಕಿ
ಮಾಟಾ ಮೋಡಿ ಮಾಡಿಕೋತ
ಕಳ್ಳಿ ಆಟಾ ಆಡಿಕೋತ
ಅಲ್ಲೇ ಕುಳಿತಿ
ಬಾರೇ ಗೆಳತಿ ೪

ನೀ ಕೂತಲ್ಲಿ
ಜ್ಯೋತಿಯ ಢಾಳ
ನಾ ಕೂತಲ್ಲಿ
ಕತ್ತಲೆ ಕಾಳ
ಕಂಡೂ ಕಂಡೂ ಕೂತೇ ಕೂತಿ
ತಿಳಿದೂ ತಿಳಿದೂ ಹಾಗೇ ಇರತಿ
ಅಲ್ಲೇ ಕುಳಿತಿ
ಬಾರೇ ಗೆಳತಿ ೫

ಏಸೋ ಕಾಲಕೆ
ಅಟ್ಟಕೆ ಬಂದೀ
ಅಲ್ಲೀದಿಲ್ಲೀ–
ಗೆಂದರೆ ಬಂದೀ
ಬರತೀ ಬರತೀ ಬಂದೇ ಬರತೀ
ಎಷ್ಟೋತ್ತಾರೆ ಅಲ್ಲೇ ಇರತಿ
ಅಲ್ಲೇ ಕುಳಿತಿ
ಬಾರೇ ಗೆಳತಿ ೬

———

## ೧೯. ಸಿಡಿಲು

ಹಣ್ಣು ಬಿತ್ತು ಹಣ್ಣು ಬಿತ್ತು
ಇಂದ್ರವನದ ಹಣ್ಣು ಬಿತ್ತು
ಅಲ್ಲಿ ಬಿತ್ತು ಇಲ್ಲಿ ಬಿತ್ತು
ಎಲ್ಲಿ ಬಿತ್ತು ? ಇಲ್ಲೆ ಬಿತ್ತು ೧

ಆಚೆ ಗಿಡದ ಕೆಳಗೆ ಕೆಲರು
ಈಚೆ ಗಿಡದ ಬುಡಕೆ ಕೆಲರು
ಅಲ್ಲಿ ಕೆಲರು ಇಲ್ಲಿ ಕೆಲರು
ಅಲ್ಲಿ ಇಲ್ಲಿ ಎಲ್ಲೊ ಕೆಲರು ೨

ಗಾಳಿ ಉಕ್ಕಿ ಒದರಿತಾಗ
ಗಿಡದ ಸಾಲು ಅದುರಿತಾಗ
ಅತ್ತ ಇತ್ತ ಅಂಧಕಾರ
ನೋಡಿದತ್ತ ದುಂದಕಾರ ೩

ಲೋಕವೆಲ್ಲ ಮೊಬ್ಬುವರಿದು
ಸರುವ ಜನದ ಮಬ್ಬು ಹರಿದು
ದೊಡ್ಡದೊಂದು ಸಪ್ಪುಳಾಗಿ
ಜಗದ ಮೋರೆ ಸಪ್ಪಗಾಗಿ ೪

ಗಗನ ಪೃಥ್ವಿ ಏಕವಾಗಿ
ಲೋಕ ಕಕ್ಕವಿಕ್ಕಿಯಾಗಿ
ಹಣ್ಣು ಬಿತ್ತು ಹಣ್ಣು ಬಿತ್ತು
ಇಂದ್ರವನದ ಹಣ್ಣು ಬಿತ್ತು ೫

ಬಿತ್ತು ಬಿತ್ತು ಇಲ್ಲೆ ಬಿತ್ತು
ಲೋಕಕೆಲ್ಲ ದಿಗಿಲು ಬಿತ್ತು

"ಇಲ್ಲೆ ಬಿತ್ತು" "ಇಲ್ಲೆ ಬಿತ್ತ !"
ಎಲ್ಲರಂದ"ರಿಲ್ಲೆ ಬಿತ್ತು ! !" ೬

ಬೇಡದವರ ಮೇಲೆ ಬಿತ್ತು
ಬೇಡಿದವರಿಗೆ ಇಲ್ಲ ತುತ್ತು
ಹಸಿಯದವರು ಹಲವು ಮಂದಿ
ಹಸಿದ ಜನರು ಕೆಲವು ಮಂದಿ ೭

ಹಸಿಯದವಗೆ ಅಮೃತ ವಿಷವು
ಹಸಿಯೆ ವಿಷವೆ ಅಮೃತರಸವು
ಬಯಸಿದವಗೆ ಬೇವೆ ಬೆಲ್ಲ
ಬಯಸದವಗೆ ಮೊದಲೆ ಹೊಲ್ಲ ೮

ಬೇಡದವರ ಮಗ್ಗುಲಲ್ಲೆ
ಬೇಡಿಬಯಸುವವರು ಅಲ್ಲೆ
ಬೇಡಿದಲ್ಲಿ ಬೀಳಲಿಲ್ಲ
ಬೇಡದಲ್ಲಿ ಬಿದ್ದಿತಲ್ಲ ! ೯

ಎಲ್ಲೊ ಬಿದ್ದು ಹೋಗಲಿಲ್ಲ
ಇಲ್ಲೆ ಬಿದ್ದು ತನಗೆ ಇಲ್ಲ ! ! !
ಹಣ್ಣು ಬಿತ್ತು ಹಣ್ಣು ಬಿತ್ತು
ಇಂದ್ರವನದ ಹಣ್ಣು ಬಿತ್ತು ! ೧೦

———————

## ೨೦. ಅಣ್ಣಯ್ಯನಿಗೆ

ಮಾತುಮಾತಿಗೆ ಬಿಡದೆ ನಡುವೆ ನುಸುಳುವ ನಿನ್ನ
ಅರ್ಥವಿಲ್ಲದ ಆ 'ಅದಲ್ಲ'ದರ್ಥಕೆ ನಾನು
ಬೆರಗುಬಟ್ಟೆನು ನಿನ್ನ ನೇರಿನೇತಿಯ ಹೋಲ್ವ
ಅರುವಿನಾ ಆಳವರಿದು ೧
ಇತಿಯೆಂದು ಇತಿಯೆಂದು ಅಲ್ಲಲ್ಲೆ ಮಲೆಮಲೆತು
ಮತಿಯ ಮಡುಗಟ್ಟಿರಲು ನೇತಿಯಿಂದಗಿದಗಿದು
ಹರಿಗಡಿದ ಹೊನಲನ್ನು ಹರಿಯಹಚ್ಚುವ ನಿನ್ನ
ಹದವುಳ್ಳ ತರ್ಕ ಹಿರಿದು ೨
ಅಲ್ಲೆನ್ನದಲ್ಲಮನು ಅಹುದೆನುತ ಇದುರಿಪನು
ಅವರಂತೆ ಮಾತಾಡಿ ಅವರ ಮರವೆಯ ಹರಿದು
ನೋವುಗೊಳಿಸದೆ ಕೊಳೆಯ ಕೊಯ್ದು ಕಳೆಯುವ ನಿನ್ನ
ವೈದ್ಯಕದ ಚೋದ್ಯ ಮಿಗಿಲು ೩
ನೀ ಕಿಚ್ಚು ನಾ ಕೆಂಡ ಬೆನ್ನುಬೆನ್ನಲಿ ಬೆಸೆದ
ಏಕತೇಜದ ಎರಡು ಹಿರಿಕಿರಿಯ ಪಿಂಡಗಳ
ಬೆಳಗಿಸುವ ಜ್ಯೋತಿ ಶ್ರೀ ಅರವಿಂದಯೋಗಿಗಳ
ಹೃದಯಸ್ಥ ವಿಶ್ವಭಾನು ೪
ಹನ್ನೆರಡು ವರುಷಗಳ ದೈವದಾಟವ ಕಂಡ
ನನ್ನ ನಿನ್ನಯ ಸಖ್ಯ ಮೊಳೆತೊಂದು ತಪವಿಂದು
ಮುಂದೆ ಬಹುಕಾಲದಲ್ಲಿ ಬಿಡಲಿರುವ ಹೂ ಕಾಯಿ
ಭವಿತವ್ಯ ಗರ್ಭಗತವು ೫
ಇಂದು ಬೇಸಿಗೆಯಲ್ಲಿ ಜೀವ ಬಸವಳಿದಿರಲು
ಬಂತು ದ್ವಾದಶ ವರ್ಷದನುಪಮದ ಹಿರಿ ದಿನವು
ಮೀರಲಾಗದು ಪರ್ವಕಾಲ ಸಮಯವನೆಂದು
ಹಾಡಿದೆನು ಅಂತು ಇಂತು ೬

## ೨೧. ಮಂಗಲಸಪ್ತಕಂ

ಕಣ್ಣಲ್ಲಿ ಕಿಸುಗಿಚ್ಚು ಕಟ್ಟಿಹಾಕಿದ ನಮ್ಮ
    ಕಾಲರುದ್ರನೆ ಇತ್ತ ಕಣ್ಣನಿಟ್ಟು
ಅಣ್ಣದತ್ತನ ಬಗೆಯ ಬೇಗೆಯನು ತಣಿಸೈ
    ಬಾಲಭಕ್ತನ ಮೊರೆಗೆ ಕಿವಿಯಕೊಟ್ಟು ೧

ನಿತ್ಯನಿರ್ಮಲರೂಪ ! ಭಕ್ತ ಭಾಮಿನಿಯೋಪ !
    ಮಾರಹರ ನೀನಿತ್ತ ದೃಷ್ಟಿಯಿಟ್ಟು
ಮಿತ್ರದತ್ತನ ಮನದ ಮೈಲಿಗೆಯ ಮಾಣಿಸೈ
    ನಿನ್ನ ನಲ್ಲೆಯ ನುಡಿಗೆ ಚಿತ್ತಗೊಟ್ಟು ೨

ಶುದ್ಧಿಯನು ವರ್ಧಿಸಿದ ವರ್ಧಮಾನ ಪ್ರಭುವೆ
    ಓ ! ಮಹಾವೀರ ಕೊಲ್‌ಬಿಲ್ಲದೊಟ್ಟು
ಮುದ್ದು ದತ್ತನ ಬಗೆಯ ಬನದಲ್ಲಿ ಬೇಟೆಯ–
    ನ್ನಾಡಿಂದು ಹೊಚ್ಚಹೊಸ ಹುರುಪುದೊಟ್ಟು ೩

ಹಾದಿಯಿಲ್ಲದೆ ಹರಿವ ಮರುಳ ಮನವನು ನಿನ್ನ
    ಬುದ್ಧಿಬಲದಿಂದಲೇ ಬದ್ಧಗೊಳಿಸಿ
ಬೋಧಿವೃಕ್ಷದ ಬುಡಕೆ ಸಿದ್ಧಾರ್ಥನಾದ ಶ್ರೀ
    ಬುದ್ಧದೇವನೆ ನಿನ್ನ ಪಾದ ಸ್ಮರಿಸಿ ೪

ಭೂತನಾಥನೆ ಓತು ಬೇಡಿಕೊಂಬೆನು ದೇವ
    ಅಣ್ಣದತ್ತನ ಮನದ ಮುಸುಕು ಸರಿಸಿ
ಭೂತಳದೆ ಬೆಳಗಿಸೈ ಭೂತಭೂತಗಳಲ್ಲಿ
    ನಿನ್ನ ಬುದ್ಧಿಯನದರ ಬಲಕೆ ಬೆರಿಸಿ ೫

ನಿರ್ಜರ ತರಂಗಿಣಿಯೆ ದುರಿತಹಾರಿಣಿ ನಿನ್ನ
    ಹರಿಚರಣ ತೀರ್ಥಜಲ ಧಾರೆಯೆರೆದು

ನಿರ್ಜರರ ನಾಯಕನ ಅಣ್ಣ ದತ್ತಾತ್ರಯನ
ಮನವನ್ನು ಮಡಿಗೊಳಿಸು ಮೇರೆವರಿದು ೬

ಗುಹೇಶ್ವರನ ಗುಹೆಯ ಗುಹ್ಯ ವಚನವ ನುಡಿದ
ಅಲ್ಲಮಪ್ರಭುದೇವ ನಿನ್ನ ನುಡಿಯ
ಗುಹ್ಯಜ್ಯೋತಿಯನೆನ್ನ ಅಣ್ಣದತ್ತನ ಬಗೆಯ
ಬಿಲದ ಬರ್ದಿಲದಲಿ ಬೆಳಗಿಸೊಡೆಯ ೭

---

## ೨೨. ದೀನಬಂಧು ಸಿ.ಎಫ್. ಆಂಡ್ರೂಜ್

(ಸೀಸಪದ್ಯ)

ಸತ್ಯಶೋಧಕನಾಗಿ ನಿತ್ಯಬೋಧಕನಾಗಿ
ಭಾರತಾಂಬೆಯ ಭಕ್ತಶ್ರೇಷ್ಠನಾಗಿ
ದುಷ್ಟದೂಷಕನಾಗಿ ಶಿಷ್ಟತೋಷಕನಾಗಿ
ದೀನಸೇವಕ ದೀನಬಂಧುವಾಗಿ
ಅಸಹಕಾರದ ಪರಿಯ ವಿಷದಗೊಳಿಸುವನಾಗಿ
ಅಪರದೇಶದ ಅಸಹಯೋಗಿಯಾಗಿ
"ನೆರೆಯವರ ನಿನ್ನಂತೆ ಅರಿ"ಯೆಂದು ತನ್ನವರಿ
ಗರಿಕೆಪಡಿಸುವ ಕ್ರಿಸ್ತದಾಸನಾಗಿ ೧

"ಚೂರು ಬೆಲ್ಜಮನಾಡ ಸ್ವಾತಂತ್ರ್ಯ ಸ್ಥೈರ್ಯಕಾಗಿ
ಘೋರ ಯುದ್ಧಕೆ ನಿಂತೆವೆಂದೇಕ ಕಂಠವಾಗಿ
ಸಾರುತಿರುವವರೇಕೆ ಭಾರತಿಯ ಬಿಡಿಕೆಗಾಗಿ
ಹೋರಾಡಲಾರಿರೋ?" ಎಂದು ಸುಸ್ಪಷ್ಟವಾಗಿ ೨

ತಾನೆಲ್ಲ ಪಾಶ್ಚಾತ್ಯ ಪ್ರಮುಖರ್ಕಳಂ ಕೇಳುವಂ
"ದಾನಬೇಕಿಲ್ಲೆಮಗೆ; ಸ್ವಾತಂತ್ರ್ಯ ಬೇಕೆ"ನ್ನುವಂ
ಜ್ಞಾನವಿಧಿ–ಕವಿ–ರವಿಯ ನೆರಳಿನಂತಿರ್ದು ಮೆರೆವಂ
ಮಾನನಿಧಿಯಾಂಡ್ರುಜಂ ಮಾನವರೊಳೊಗೆದ ದೇವಂ ೩

---

## ೨೩. ಧನ್ಯಸೀತೆ

ಯಾರ ಮಾಸ್ತಿಯ ಕಲ್ಲು
ರಾಮಾಯಣದ ಸೊಲ್ಲು
ನಾಡನಾರಿಯರ ಗೆಲ್ಲು ೧

ಯಾರ ಹೆಸರಿನ ಸದ್ದು
ಕವಿಯ ತುಟಿಗಳ ಮುದ್ದು
ಮನದ ಮೈಲಿಗೆಯ ಮದ್ದು ೨

ಯಾರ ಲೀಲೆಯ ನೆನಸು
ದೇವಲೋಕದ ಕನಸು
ನಲ್ಲನಲ್ಲೆಯರ ಮನಸು ೩

ಯಾರ ಕೀರ್ತಿಯ ಹಾಡು
ಕವಿಯ ನಾಲಿಗೆಗೀಡು
ರಾಗ ರಸಗಳಿಗೆ ಬೀಡು ೪

ಯಾರ ಬಾಳ್ವೆಯ ತೋಡು
ಯೋಗ ಭೋಗದ ಜೋಡು
ಸಮಸಿರಿಯ ಕಾಡುನಾಡು ೫

ಸೀತೆ ನಿನ್ನೀ ಪಾಡು
ನನ್ನೆದೆಯ ಸವಿಹಾಡು
ನೀನೆ ಕಡುಧನ್ಯೆ ನೋಡು ೬

---

## ೨೪. ಮುರಲೀಧರಂ*

ಮಧುರ ಮನೋಹರ ಮುರಲಿಯನೂದುವ
ಚದುರ ಕೃಷ್ಣ ನೀ ಬನದೊಳು ಕೆಳದೀ ॥ ಪಲ್ಲ ॥

ಏಳು ಸರಗಳನು ಮೇಳಮಾಡುತಲಿ
ಪೇಳ್ವನೆಲ್ಲ ರಾಗರಾಗಿನಿಗಳಂ ೧

ರಚಿಸಿ ದೀರ್ಘರವ–ಜಾಲವ ಗೋಪಿ–
ಪ್ರಚಯವ ಜಮುನೆಗೆ ಕರೆಯುತಲಿಹನೌ ೨

ಸಾಂದ್ರ ಚಂದ್ರಿಕಾ ಚಂದ್ರರಿನೊಪ್ಪುವ
ಚೆಂದದಲಿರುಳೊಳು ಕೋಲನಾಡುವಂ ೩

ದರುಶನಕೆಂದೀ ಬ್ರಹ್ಮಾನಂದಂ
ಸುರವಿಮಾನವನ್ನೇರಿ ಬರುವನೌ ೪

---

* ಬ್ರಹ್ಮಾನಂದ ಪರಮಹಂಸರ ಒಂದು ಹಿಂದೀ ಕವಿತೆಯ ಅನುವಾದ,

## ೨೫. ಮಹಾಕೃಪೆ

ಕಂದ : ಜನನಿಯ ಸುಸ್ಮಿತಹಾಸಂ
ಜನನಿಯ ಕರುಣಾಕಟಾಕ್ಷ ಶಿಶುಸಂಕುಲಕೆ
ಜನನಿಯ ಹಸ್ತಸ್ಪರ್ಶಂ
ಜನಿಯಿಸುಗುಂ ಜ್ಞಾನ ಶಕ್ತಿ ಶಾಂತ್ಯಾನಂದಂ

---

## ೨೬. ಅಭೀಪ್ಸಾ

ಇಲ್ಲದ್ದಾಗಲು ಬಯಸುವದಿಲ್ಲ
ಇದ್ದದ್ದಾಗಲು ಹೇಸುವದಿಲ್ಲ
ಏನಿಹೆನೋ ಅದೆ ಮಾಡಿರಿ ಜನನೀ
ನಾನಿದಕಸಮಿಸಿಗೊಳ್ಳೆನು ಕರುಣೀ
ನೀವೀ ಜಗತಿಯ ಒಡತಿಯರಹುದು
ನಾವೀ ಜಗತಿಯ ಒಡವೆಗಳಹುದು
ಯಾವುದನೆಲ್ಲಿರಿಸುವದದು ಯೋಗ್ಯ
ನೀವೇ ಬಲ್ಲಿರಿ ಯೋಗ್ಯಾಯೋಗ್ಯ
ಎಲ್ಲವು ಬಗೆವುದು ತಾನೇ ಶ್ರೇಷ್ಠ
ಬಲ್ಲರೆ ಬಲ್ಲರು ಶ್ರೇಷ್ಠ ಕನಿಷ್ಠ
ಹಿರಿದಾದರು ಅದು ನಿಮ್ಮಯ ಸೊತ್ತು
ಕಿರಿದಾದರು ಅದು ನಿಮ್ಮದೆ ಸೊತ್ತು
ನಿಮ್ಮಯ ಸೊತ್ತಾಗಿದ್ದುದೆ ಭಾಗ್ಯ
ನಿಮ್ಮವನೆಂಬುದೆ ಸಿರಿ ಸೌಭಾಗ್ಯ
ಹಿರಿಕಿರಿದೆಂಬುದು ಹೆಮ್ಮೆಗೆ ಅಲ್ಲ
ವರಸಾನಿಧ್ಯದ ಬಯಕೆಯಿದೆಲ್ಲ
ತೆರಪಿಲ್ಲೌ ಹಿರಿಮಕ್ಕಳ ಸುಖಕೆ
ತೆರೆಯ ಮರೆಯು ಕಿರಿಮಕ್ಕಳ ತತಿಗೆ
ಅಂತೆಯೆ ಹಿರಿ ಬಳಗದೊಳಿರಬಯಸಿ
ಸಂತತ ಆಲ್ಪರೆದೆನು ತಳಮಳಿಸಿ
ಖಂಡರಹಿತ ಸನ್ನಿಧಿಗಾನೆಳಸಿ
ಕಂಡಂತೆಯೆ ಮೊರೆದೆನು ಕಳವಳಿಸಿ
ನನ್ನ ಸ್ಥಳವ ನಾನರಿಯುವದೆಂತು ?
ನಿನ್ನ ಕೃಪೆಯ ಕೈದೀಪವು ಬಂತು

*   *   *   *

ಕಿರಿಯರೊಳಗೆ ಇನ್ನಿಬ್ಬಗೆಯುಂಟು
ಅರಿಯೆನವ್ವ ನನಗಾವುದು ಗಂಟು
ಎಲ್ಲೆಲ್ಲಿದ್ದರು ಅಲ್ಲಲ್ಲಿದ್ದೇ
ಸಲ್ಲಿಸಿ ಭಕ್ತಿಯ ನಿಮ್ಮಡಿಗಳಿಗೆ
ಕಾಲಕೆ ಕಾಲಕೆ ನಿಮ್ಮಡಿಗಳಿಸಿ
ಶೀಲದಿಂದ ನಿಮ್ಮಡಿ ಸುಖಗಳಿಸಿ
ಮೇಲಕೆ ಮೇಲಕೆ ಬಿಗಿಯುತಲಿದ್ದು
ಮೆಲ್ಲಕೆ ಮೆಲ್ಲಕೆ ಬೆಳೆಯುವರೆದ್ದು
ಈ ಕಿರಿಮಕ್ಕಳ ಬಳಗದೊಳಿರಿಸಿ
ಸಾಕಿ ಸಲುಹಿರಿ ಮಗುವನು ಹರಸಿ
ಸತತವಿಲ್ಲದಿರೆ ಮೇಲಿಂಮೇಲೆ
ಸುತಗೆ ಅಡಿಯ ಹುಡಿ ನೀಡಿರಿ ಕರುಳೇ
ಈ ಸುಖವನೆ ನನಗೀಯುವಿರೆಂದು
ಈಸು ದಿನಕೆ ನಾನೆಣಿಸುವೆನಿಂದು
ನಿಮ್ಮೀ ಭಾಷೆಗೆ ಇದು ನನ್ನರ್ಥ
ಅಮ್ಮಾ ಜನನೀ ನಾನು ಕೃತಾರ್ಥ.

* * * *

ನನ್ನೀ ಅರ್ಥದೊಳರ್ಥದ ತಿರುಳು
ಮಾನ್ಯೇ ಇದ್ದರೆ ಉಂಟೌ ಹುರುಳು
ಇಲ್ಲದೆ ಹೋದರೆ ಇನ್ನೊಂದುಂಟು
ನಿಲ್ಲದೆ ಅದನಾದರು ಕೊಡು ಗಂಟು
ನಿಮ್ಮಯ ಕೃಪೆಯಿಂದರಿಯದೆ ಬೆಳೆದು
ನಿಮ್ಮಯ ಯುಗದ ಮಾನವ್ಯತೆ ತಳೆದು
ನಾಳಿನ ಕಾಲದ ಗುರಿಸಿರಿಗಳಲಿ
ಪಾಲನು ಪಡೆದು–ಬೆಳಗುವರಿಲ್ಲಿ
ಅವರೊಳಗಾದರು ನನಗೊಂದಿಷ್ಟು
ಭವತಾರಿಣಿ ಕೊಡು ಎಡೆಯನ್ನಿಷ್ಟು
ಏನಿದ್ದರು ನಾ ನಿಮ್ಮವನಾಗಿ

ಈ ನಾಡೊಳು ಬಾಳುವೆ ನಿಮಗಾಗಿ
ನನಗೀ ವರವನು ಕರುಣಿಸು ತಾಯೀ
ನಿನಗಿದನೊಂದೇ ಬೇಡುವೆ ತಾಯೀ
ಜಯಜಯ ತಾಯಿ ಜಯಜಯ ದೇವೀ
ಜಯವನು ನನಗೆ ಕೊಡು 'ಮಾ' ದೇವೀ

---

## ೨೭. ಪ್ರೇಮ

ಪರಮೇಶ್ವರನನು ನಂಬುವುದೆಂದು
ನೆರೆಯವರನು ಪ್ರೀತಿಸುವುದು ಎಂದು
ಗುರು ನುಡಿದನು ಈ ಹಿರಿನುಡಿಗಳನು
ಪರಮ ವಾಕ್ಯವಿದು ಅರಿಯುವದಿದನು
ಅನ್ಯದಿ ತನ್ನನೆ ಕಾಂಬುದೆ ಪ್ರೇಮ
ತನ್ನಂತನ್ಯರ ನೋಳ್ಪುದೆ ಪ್ರೇಮ
ನಿಖಿಲ ಜೀವಕೋಟಿಗೆ ಪಿತನೋರ್ವ
ಸಕಲಕೆ ಆತನು ಸಮನಿರುತಿರುವ
ಕೆಡುಕರ ಮೇಲೂ ಮಳೆಯನು ಕರೆವ
ಬಿಡದಲೆ ಅವರಿಗು ಬಿಸಿಲನು ಕೊಡುವ
ಪೊಡವಿಯ ಮೇಲೆ ಅಡಿಯಿಡಗೊಡುವಾ
ಕಿಡುಗೇಡಿಗೆ ಸಹ ಊಟಕೆ ಕೊಡುವಾ
ಆತನ ಮಕ್ಕಳು ತಿಳಿ ನಾವೆಲ್ಲಾ
ಆತನ ಬಿಡೆ ನಾವೇನೂ ಅಲ್ಲ
ತಂದೆಯ ಅಂಶವೆ ಮಕ್ಕಳ ಮೂಲ
ಒಡಲು ಬೇರೆ ಆತುಮ ಬೇರಲ್ಲಾ
ದೃಢದ ಸತ್ಯವಿದು ಬಲ್ಲವ ಬಲ್ಲಾ
ಗುರು ಈ ನುಡಿ ಬರಿ ಬಡಬಡಿಸಿಲ್ಲಾ
ಧರೆಯಲಿಂಥ ನಡೆ ತೋರಿದನಲ್ಲಾ
ಮುಟ್ಟದವರ ತಾ ಮುಟ್ಟಿದನಲ್ಲಾ
ಕೆಟ್ಟವರನು ತಾ ಕಾಪಾಡಿದನಲ್ಲಾ
ಮೀನ ಬಲೆಯ ಕಡುಬಡವರನೆಲ್ಲ
ಹೀನರೆಂದು ತಾ ಕೈಬಿಡಲಿಲ್ಲ
ನಡೆಯ ತಪ್ಪಿದಳ ಕಡೆಗಣಿಸಿದನೆ ?
ಬಡವರೆಂದು ತಾ ಹೀನಯಿಸಿದನೆ ?
ಎಳೆಮಕ್ಕಳ ತಾ ಧಿಕ್ಕರಿಸಿದನೆ ?

ಹಳಬರೆಂದು ತಾ ಮೊಗದಿರುವಿದನೆ ?
ನುಡಿದಂತೆಯೆ ಅವ ನಡೆದವನಯ್ಯಾ
ನುಡಿಯಿದು ಅವನದು ಮಿಂಚಿನದಯ್ಯಾ

* * * *

ಒಮ್ಮೆ ಓರ್ವ ಪಂಡಿತ ತಾ ಬಂದು
ಗಮ್ಮನೆ ಗುರುವಿನ ಇದಿರಿಗೆ ನಿಂದು
ಒಂದೇ ನುಡಿಯಲಿ ಸಕಲಾಗಮವ
ಅಂದದಿ ಅರುಹೆಂದತಿ ಅನುನಯವ
ಗೆಯ್ಯಲು ಗುರುವರ ತಾನೆದೆಗರಗಿ
ಕಯ್ಯನು ಮುಗಿಲಿಗೆ ಚಾಚುತ ತ್ಯಾಗಿ
ಮಹಾವಾಕ್ಯವನು ನುಡಿದನು ಅಂದು
ಅಹಾ ! ಭಕ್ತಿ ಪ್ರೇಮವೇ ಕೊನೆಯೆಂದು
ಸ್ವಾಮಿ ಅಂದು ಆಡಿದ ನುಡಿಯಿದನು
ಪ್ರೇಮದಿ ಪಠಿಸುವರಿಂದಿಗು ಇದನು
ಪ್ರೇಮ ಎಂಥದಿದು ಆತ್ಮಿಕ ಪ್ರೇಮ
ಸಾಮಾಜಿಕರದು ಬೌದ್ಧಿಕ ಪ್ರೇಮ
ಸೌಖ್ಯದ ಪ್ರಣಯವು ಕಾಮುಕ ಪ್ರೇಮ
ಅಣುವಿಗೆ ಅಣು ಕೂಡಲು ಜಡಪ್ರೇಮ
ಘನದಲಿ ಘನ ಕೂಡಲು ಆಧ್ಯಾತ್ಮ
ಬುದ್ಧಿಯ ಪ್ರೇಮವು ಬಂಧನವಯ್ಯಾ
ಉದ್ರೇಕವು ತಾನೆದೆಯೊಲವಯ್ಯಾ
ಪ್ರಾಣದ ಹುಮ್ಮಸ ಹೇಯವಿಕಾರ
ಕ್ಷೀಣವು ಜಡದಲಿ ತೋರದು ಪೂರಾ
ಜೀವರು ಈ ಬಹು ಸಾಲೆಗಳಲ್ಲಿ
ತಾವೀ ಪ್ರೇಮದ ಬಹುಪರಿಗಳಲಿ
ಪಾಠವ ಕಲಿಯುತ ಮೆಲ್ಲಗೆ ಸಾಗಿ
ಓಟದಿ ಕೊನೆಯಲಿ ಮೇಲಕೆ ಹೋಗಿ
ದೇವರ ರಾಜ್ಯದ ಸವಿಯನು ಸವಿದು

ದೇವರ ಮಕ್ಕಳ ಹೆಸರನು ಪಡೆದು
ಸರ್ವರನೆಲ್ಲಾ ಸಮವೆಂದರಿದು
ಸರ್ವೇಶ್ವರನಾ ಸಂತತಿಯೆಂದು
ಕಾಂಬರು ಇವರೇ ಇಹದ ಅಮೃತರು
ಎಂಬರು ನಿಜಪದ ಸುಖವನ್ನಿವರು.

———————

## ೨೮. ಓ – ಮ್

ಅ–ಉ–ಮ–ಎಂಬುದು ಗುರುತಂತ್ರ
ಅ. ಉ. ಮ. ದಿಂದಲೆ ಓಂ ಮಂತ್ರ
ಅ. ಉ. ಕೂಡಲು ಈ ತಾನಹುದು
ಅ. ಉ. ಇದ್ದೆಡೆ ಮ. ತಾನಿಹುದು
ಶ್ರೀ ಅರವಿಂದರೆ ಒರೊಬಿಂದೋ ಸೈ
ಈ ಅರಿವಿನ ಅಕ್ಕರವೇ ಓ ಸೈ
ಓ–ಎಂಬುದೆ ಗುರುದೇವರ ನಾಮ
ಮ–ಎಂಬುದು ಶ್ರೀ ಮಾತೆಯ ನಾಮ
'ಮಾ' ಎಂಬರು 'ಮಾತಾ'ಯೆಂಬುವರು
ಮ–ಎಂದರೆ ಮಾತಾಯಿಯ ಹೆಸರು
ಸೈಗುಡುವಾತನು ಆತನೆ ಸ್ವಾಮಿ
ಕೈಗೂಡಿಸುವವಳೀತಳೇ ಪ್ರೇಮಿ
ಆತನ ಅನುಮತಿ ಈತಳ ದಯವು
ಚೇತನವೆಲ್ಲಕೆ ಪರಮಪ್ರಿಯವು
ಶ್ರೇಯಪ್ರೇಯಕೆ ಇವರಾಧಾರಾ
ಹೇಯಕೆ ಮಾತ್ರವೆ ಸುಬಹಿಷ್ಕಾರಾ
ಪ್ರೇಮವದೆಲ್ಲವು ಹೇಯವೆ ಅಲ್ಲಾ
ಶ್ರೇಯವ ಮರೆವುದೆ ಹೇಯವು ಎಲ್ಲಾ
ಅ. ಉ. ಮ. ಎಂಬುದು ಗುರುಮಂತ್ರ
ಅ. ಉ. ಮ. ದಿಂ ಸಕಲ ಸ್ವತಂತ್ರ
ಇದ ಬಿಟ್ಟೆಂದೂ ನಾ ಸಾಗಿಲ್ಲ
ಇದ ಬಿಟ್ಟಾರೂ ಸಾಗಿಯೆ ಇಲ್ಲ
ಇದ ಬಿಟ್ಟರೆ ಸಾಗುವುದೇ ಇಲ್ಲ
ಇದು ಈ ಪರಿಯಲಿ ಶಾಶ್ವತ ಸೊಲ್ಲಾ
ಇದು ತಾಯ್ತಂದೆಗಳೆರಕದ ಶಬ್ದ
ಇದೆ ಸಕಲೋತ್ಪತ್ತಿಗೆ ನೆಲೆಶಬ್ದ

ತಾಯ್ತಂದೆಗಳಿಲ್ಲದ ನಿರ್ಮಿತಿಯೇ ?
ತಾಯ್ತಂದೆಗಳಿಲ್ಲದೆ ಸುಸ್ಥಿತಿಯೇ ?
ಸೃಷ್ಟಿ – ಸ್ಥಿತಿಗಳಿಗಿವರಾಧಾರಾ
ನಷ್ಟದ ವೇಳೆಗೆ ಏಕಾಕಾರಾ
ಅ. ಉ. ಮ. ಆರಂಭಕೆ ಮಂತ್ರ
ಅ. ಉ. ಮ. ಸ್ಥಿತಿಗತಿಗೂ ಮಂತ್ರ
ಅ. ಉ. ಮ. ಅಂತ್ಯದೊಳೂ ಮಂತ್ರ
ಅ. ಉ. ಮ. ವೆ ಅನಂತದ ತಂತ್ರ
ತಾಯಿಯ ನೆನೆಯದೆ ನಾ ಬಾಳೇನೇ ?
ತಾಯಿಯೆ ಎನಗೆ ತಂದೆಯು ತಾನೆ
ತಾಯ್ತಂದೆಗಳೇ ಎನಗಾಧಾರಾ
ತಾಯ್ತಂದೆಗಳೇ ಎನಗನಿವಾರಾ
ಅವರನು ಬಿಟ್ಟು ನಾನಿರಲಾರೆ
ಅವರೇ ಎನ್ನಯ ಜೀವನಧಾರೆ
ಅವರೇ ಎನ್ನಯ ಗತಿಯೂ ಮತಿಯೂ
ಅವರೇ ಎನ್ನಯ ಸ್ಥಿತಿಯೂ ಗತಿಯೂ
ಅವರೇ ಎನ್ನಯ ಶ್ರೇಯ ಪ್ರೇಯ
ಅವರನು ಬಿಟ್ಟರೆ ನಾನೇ ಹೇಯ
ಅವರಿಂ ಬಾಳುವೆ ಅವರಿಂ ಬದುಕುವೆ
ಅವರಿಂದಲೆ ನಾ ಆಡುವೆ ಹಾಡುವೆ
ಎಲ್ಲಾ ಅವರೇ ಎಲ್ಲಕು ಅವರೇ
ಎಲ್ಲೆಡೆಯಲಿ ನನಗವರೇ ಅವರೇ
ಅವರೇ ಎನ್ನಯ ಪ್ರಾಣಕೆ ಉಸಿರು
ಅವರೇ ಎನ್ನಯ ಪಿಂಡಕೆ ಬಸಿರು
ಅವರ ಕೃಪಾಲವಲೇಶಕ್ಕೇನೇ
ತವಕಿಸುತಾ ಶಿಶು ತುಳಿಯುತ್ತೇನೆ
ಅವರ ಕೃಪೆಯನು ನೆನೆಸಿನ ಕ್ಷಣಕೆ
ಭವದೂರನು ನಾ ಸರಿಯ್ಕೆ ಹೆಣಕೆ
ಸುಮ್ಮನೆ ಸತ್ತವರೊಳ್ಳೆವರೆನ್ನಿ
ಅಮ್ಮಮ್ಮಾ ! ಅವಕೃಪ ಅತಿಹಾನಿ

ಅವಕೃಪೆಯಿಂದಲೆ ಅಂಧಂತಮಸ್ಸು
ಅವನಿಯೊಳಿಂಥ ಮೃತಿ ಅತಿ ಗಡಸು
ಇದ್ದೂ ಮೃತಿಯೇ ಸತ್ತೂ ಮೃತಿಯೇ
ಕಲ್ಪಾಂತ್ಯದ ವರೆಗಿಂತಾ ಗತಿಯೇ
ಅವಕೃಪೆಯೆಂದರೆ ಕ್ರೋಧವದಲ್ಲ
ಅವರಲಿ ಕೋಪವು ಮೊದಲೇ ಇಲ್ಲ
ಕೃಪೆಯನು ಕರೆಯಲು ಒಲ್ಲೆವು ನಾವು
ಕೃಪೆಯನು ಹಿಂದೂಡಲಿಕೂ ಇಹೆವು
ಹಿಂದಿರುಗುವುದೇ ಅವಕೃಪೆ ತಾನು
ಅಂಧಂತಮಸಿದರಿಂದರಿ ನೀನು
ಜನ್ಮವೆ ವ್ಯರ್ಥವು ಅದರಿಂ ಮುಂದೆ
ಜನ್ಮವೆ ಇಲ್ಲವು ಅದೆ ಬರಿ ಮುಂದೆ
ಅದುವೇ ಅದುವೇ ಅದುವೇ ಒಂದೇ
ಅದರಿಂದಲೆ ನಡೆ ಕೃಪೆಯುಲಿ ಮುಂದೆ
ಕೃಪೆಯೇ ಬೆಳಕೂ ಕೃಪೆಯೇ ಬಾಳೂ
ಕೃಪೆಯೊಂದಕೆ ನೀನೆಲ್ಲಾ ತಾಳು
ಅ. ಉ. ಮ. ಎಂಬುದೆ ಗುರುತಂತ್ರ
ಅ. ಉ. ಮ. ದಿಂ ಸಕಲ ಸ್ವತಂತ್ರ

---

## ೨೯. ಮಾತಾಯಿ

ಶ್ರೀ ಜನನಿ ನಿನ್ನ ಚರಣಕೆ ನನ್ನ ನಮನ
ಶ್ರೀ ಜನನಿ ನಿನ್ನ ಸೇವೆಗೆ ನನ್ನ ಹರಣ
ಶ್ರೀ ಮಾತೆ ಶ್ರೀ ಜನನಿ ನೀನೆನ್ನ ತಾಯಿ
ಶ್ರೀ ಮಾತೆ ಶ್ರೀ ಜನನಿ ನೀನೆನ್ನ ಕಾಯೆ
ಶ್ರೀ ತಾಯಿ ಶ್ರೀ ಮಾಯಿ ಶ್ರೀ ಮೂರ್ತಕೃಪೆಯೇ
ಶ್ರೀ ತಾಯಿ ಶ್ರೀ ದೇವಿ ಓಂಕಾರನಿಲಯೇ.

* * * *

ಶ್ರೀ ಮಹೇಶ್ವರಿ ಮಹಾಕಾಲಿ ನೀನಮ್ಮಾ
ಶ್ರೀ ಮಹಾಲಕ್ಷ್ಮಿ ಸರಸತಿಯು ನೀನಮ್ಮಾ
ಪರಮೇಶ್ವರಿಯು ತಾಯೆ ನೀನಾದಿ ಮಾತೆ
ವರ ಮಹಾಶಕ್ತಿ ನೀ ವ್ಯಕ್ತೆ ಅವ್ಯಕ್ತೆ
ಜಯ ಜನನಿ ಕಗಕರ್ತ್ರಿ ಜಗಭರ್ತ್ರಿ ತಾಯೇ
ಜಯ ಜಗದ್ವ್ಯಾಪಿನೀ ತಾಯಮ್ಮ ಕೇಯೇ
ಅವತಾರಿಣಿಯು ನೀನು ಉದ್ಧಾರಿಣಿಯು ನೀ
ಶಿವಕರಿಯು ಶಂಕರಿಯು ವರಸುಖಂಕರಿ ನೀ
ಸುತವತ್ಸಲೆಯು ನೀನು ತನುಜನನು ನೋಡೌ
ಮತಿಯೆನ್ನ ಕುಂಠಿಸದೆ ತಿಳಿವ ದಯಮಾಡೌ
ಮಕ್ಕಳನು ಉದ್ಧರಿಸಬಂದ ಹಡೆದವ್ವಾ
ಕಕ್ಕುಲತೆಯಿಂದೆನ್ನ ನಡಿಸು ನನ್ನವ್ವಾ
ಕೂಸುಗಳ ಹಿತಕರ್ತ್ರಿ ಕಾಯವ್ವ ತಾಯೇ
ಮಾಸಿದಾ ಮಗುವನ್ನು ತೊಳೆಯವ್ವ ಮಾಯೇ

* * * *

ಸಚ್ಚಿದಾನಂದ ವಿಜ್ಞಾನ ಮನಪ್ರಾಣ
ಅಚ್ಚ ಜಡವನು ಸಹಿತ ಅನುಗೊಳಿಸು ನೀನು
ದೇಹದಾ ಸುಸ್ಥಿತಿಗೆ ಅನ್ನ ಜಲ ನಿದ್ರೆ
ಮೋಹಗೊಳಿಸದ ಅರಿವೆ ದಯಮಾಡು ಭದ್ರೆ
ಪ್ರಾಣದಾ ಸುಸ್ಥಿತಿಗೆ ಉಚಿತವಹ ಕೆಲಸ
ಮೇಣದಕೆ ಮನಧನದ ನೆರವು ಶತವರುಷ
ಮನಬುದ್ಧಿಗಳ ಸ್ಥಿತಿಗೆ ಬಗೆಬಗೆಯ ತಿಳಿವು
ಅನವರತವಿರಲೆಮ್ಮ ಇದರಿಂದೆ ಇರವು
ಇವು ಎಲ್ಲಗಳ ಮೀರಿ ನಮ್ಮ ಸಾಮ್ರಾಜ್ಯ
ಭವದೊಳಗೆ ಅಧ್ಯಾತ್ಮ ಅದರಿಂದೆ ಸಹಜ
ಜಯಜಯವು ಜಯಜಯವು ಜಯಜಯವು ತಾಯೇ
ಜಯಜಯವು ಜಯಜಯವು ಜಯಜಯವು ಕಾಯೇ.

---

## ೩೦. ಜೀವನ

ಜೀವನ ಜೀವನ ಎಂಥಾ ಜೀವನ
ಜೀವನ ಜೀವನ ದೈವೀ ಜೀವನ
ಖಮ್ಮನೆ ಬಾಳ್ವುದು ಜೀವನವೇ ಸೈ
ಸುಮ್ಮನೆ ಬಾಳ್ವುದು ಸಹ ಅದುವೇ ಸೈ
ಸುಮ್ಮನೆ ಬಾಳ್ವರು ಕರಿಯರು ನಾವು
ಖಮ್ಮಗೆ ಬಾಳ್ವರು ಬಿಳಿಯರು ತಾವು
ಕರಿಯರ ಒಳಗೂ ಮೇಲ್‌ಕೀಳುಂಟು
ಅರಿಯಿದು ಬಿಳಿಯರ ಒಳಗೂ ಉಂಟು
ಕರಿಯರ ಹಿರಿಯರು ನೈತಿಕರಯ್ಯಾ
ಹಿರಿಬಿಳಿಯರು ರಸರಾಗಿಗಳಯ್ಯಾ
ಕರಿಯರ ಕಿರಿಯರು ಜಡತೆಯ ಶಿಖರ
ಕಿರಿಬಿಳಿಯರು ಗಡ ಶಕ್ತಿಸಮುದ್ರ
ಬಿಳಿಯರ ಒಳಗೆ ಮೂದೆರನುಂಟು
ತಿಳಿವಿನ ಶಕ್ತಿಯ ಅಂದದ ನಂಟು

* * * *

ಶಕ್ತಿಯ ಭಕ್ತರು ಕರ್ಮಪ್ರಿಯರು
ಭಕ್ತರು ಬೆಡಗಿನ ಭೋಗಪ್ರಿಯರು
ಜ್ಞಾನದ ಭಕ್ತರು ಶೋಧಪ್ರಿಯರು
ತಾನೀ ಪರಿಯಲಿ ಭೌತಿಕದೊಗರು

* * * *

ಪ್ರಾಣದ ದಾಸರು ಮೆದುಳಿನ ಭಟರು
ನಾನಾ ಕಾಗದ ಹಡೆವರು ಹರರು
ಸ್ಥೈರ್ಯವ ಕೆಡಿಸುವ ಕಾಗದ ಗಂಟು
ಧೈರ್ಯವ ಸುಳ್ಳೇ ಹೇಳುವುದುಂಟು
ಬುದ್ಧಿಯ ಜಾಳಿಗೆ ಈ ಕಗ್ಗಂಟು
ಬುದ್ಧಿಗೆ ದಿಗ್‌ಭ್ರಮೆ ಹಿಡಿಸುವುದುಂಟು

* * * *

ಭೋಗಕೆ ಯೋಗವ ಬೆಸೆವರು ಬೇರೆ
ತ್ಯಾಗವ ಭೋಗಕೆ ಸಲಿಪರು ಬೇರೆ
ನಾರೀ ದೇಹವೆ ಸ್ವರ್ಗದ ಸಿರಿಯು
ನಾರಿಯರೊಲುಮೆಯೆ ಬಾಳ್ವೆಯ ಗುರಿಯು
ನಾರಿಯ ಗುಡಿಯಲಿ ಉಪದೇವಿಯರು
ಭೂರಿ ವಿಲಾಸದ ನೆರೆ ನೂರಾರು
ಸೌಂದರ್ಯವೆ ಈ ಯೋಗದ ಸತ್ಯ
ಸುಂದರ ಪ್ರೇಮವೆ ತೂರ್ಯಾತೀತ್ಯ

* * * *

ಅಸುವನು ಕರ್ಮಕೆ ನೀಗುವರುಂಟು
ಅಸುವನು ಭೋಗಕೆ ಎರೆಯುವರುಂಟು
ಅಸುವನು ತಿಳಿವಿಗೆ ಸಲ್ಲಿಪರುಂಟು
ಅಸುಕಸ ಅವರದು ಕ್ಷತ್ರಿಯಭಂಟು

* * * *

ನಮ್ಮಯ ಹುಂಬರು ಕುರಿಗಳ ಹಿಂಡು
ನಮ್ಮಯ ಹಿರಿಯರು ಹುಚ್ಚಿನ ದಂಡು
ಪಾಪದ ಹುಚ್ಚು ಪುಣ್ಯದ ಹುಚ್ಚು
ಆ ಪರಜನ್ಮದ ಬಾಳಿನ ನೆಚ್ಚು
ಕರ್ಮದ ಹುಚ್ಚು ಧರ್ಮದ ಮೆಚ್ಚು
ಧರ್ಮ–ಕರ್ಮದಲಿ ಬದುಕೇ ಕಿಚ್ಚು

*        *        *        *

ಜಗವಿದು ಸ್ವಾಮಿಯ ಲೀಲೆಯು ಎಂದು
ಜಗದೀಶನ ಘನ ಲೀಲೆಯಿದೆಂದು
ಆತ್ಮನಿಂದ ಜಡ, ಜಡದಿಂದಾತ್ಮ
ಆತ್ಮಲೀಲೆ ನಡೆಸಿಹ ಪರಮಾತ್ಮ
ಈ ಗುಟ್ಟನು ತನ್ನಾತ್ಮದೊಳಿರಿಸಿ
ಈ ಗುಟ್ಟಿನ ಆಟದೊಳತಿ ಬೆರೆತು
ಆತ್ಮನಾಗಿ ಆತ್ಮರ ಬಳಗದೊಳು
ಆತ್ಮಕಾಗಿ ಕೊಡಕೊಂಬುದು ಬಾಳು
ಇದು ಸಿರಿಬಾಳು ಇದು ಹಿರಿಬಾಳು
ಇದನರಿ ಇದುವೇ ದೈವೀಬಾಳು

## ೩೧. ಅಸಮಾಧಾನ

ಯಾತಕೆ ಯಾತಕೆ ಈ ಪರಿ ಜೀವಾ?
ಯಾತಕೆ ತಲೆಯಲಿ ಗಲಿಬಿಲಿ ಜೀವಾ?
ಮನಸಿನ ನಿಶ್ಚಿತವೇತಕೆ ಜೀವಾ?
ನಿನಗೇನಂತಹದಾಗಿದೆ ಜೀವಾ?
ಅವರಿವರಾ ಗಲಿಬಿಲಿಯದು ಜೀವಾ
ಅವರಿವರಲಿ ನೀನೇಕೋ ಜೀವಾ?
ಇನ್ನೊಬ್ಬರ ಅಸಮಾಧಾನದೊಳು
ನಿನ್ನೊಬ್ಬನಿಗೇ ಅಲ್ಲವು ದಿಗಿಲು
ಸುತ್ತುಮುತ್ತು ಇನ್ನೆಷ್ಟೋ ಜನಕೆ
ಮತ್ತಿಕೊಳ್ಳುವದು ಇದು ಆ ಕ್ಷಣಕೆ
ಅಸಮಾಧಾನದ ವ್ಯಕ್ತಿಯ ಹಿತರು
ಅಸಮಾಧಾನಕೆ ಬಲಿ ಬಿದ್ದಿಹರು
ಅವರಿವರೆಲ್ಲರ ಅಸಮಾಧಾನ
ತವಕದಿ ನಿನ್ನೊಳು ಬೆಳೆವುದು ತಾನಾ
ಅದರಿಂ ಕುಸಿವುದು ನಿನ್ನಯ ತಾಳ್ಮೆ
ಇದರಿಂ ಮತ್ತಿನ್ನೆನಿಬರ ತಾಳ್ಮೆ
ಈ ಪರಿ ಒಂದರಿನೊಂದಕೆ ಬೆಳೆದು
ಭಾಪುರೆ, ಹಬ್ಬುತಲೇ ಸಾಗುವದು
ಹೀಗಾಗಿಯೆ ಇಂತಸಮಾಧಾನ
ಬೇಗನೆ ಕವಿವುದು ನಿನ್ನನು ತಾನಾ
ಗಾಳಿಗೆ ಏಳುವ ಧೂಳಿಯ ಹಾಗೆ
ಬಾಳುವುದೊಂದೇ ಘಳಿಗೆಯ ವರೆಗೆ
ಗಾಳಿಯು ನಿಲ್ಲಲು ಧೂಳಿಯ ಹಾಗೆ
ಬಾಳುವುದೊಂದೇ ಘಳಿಗೆಯ ವರೆಗೆ
ಗಾಳಿಯು ನಿಲ್ಲಲು ಧೂಳಿಯು ಇಲ್ಲ

ಕೇಳ್ಕೆ ಹೀಗೇ ದಿಗಿಲೂ ಎಲ್ಲಾ
ಇಲ್ಲಾ ಇಲ್ಲಾ ಏನೂ ಇಲ್ಲಾ
ಎಲ್ಲಾ ಹೀಗೇ ಬಲ್ಲವ ಬಲ್ಲಾ

## ೩೨. ಪಾತ್ರತೆ

ನನ್ನಯ ಜನನೀ ಚಿನ್ಮಯ ಕರುಣೀ
ನಿನ್ನಡಿಯಲ್ಲಿ ನಿನ್ನುಡಿಯಲ್ಲಿ
ಸ್ಥಾನವದಿಲ್ಲ ನನಗೆಡೆಯಿಲ್ಲ
ಏನೌ ಮಾತೇ ಸಾರೌ ಪ್ರೀತೇ
ಅಡಿಯೆಡೆಯಲ್ಲಿ ನೆರಳಡಿಯಲ್ಲಿ
ಎಡೆಯಿಲ್ಲದಿರೆ ನನ್ನೆದೆ ಅದಿರೆ
ನೀನೇ ಬಲ್ಲಿ ನನಗೆಡೆಯಲ್ಲಿ
ನಾನೇಂ ಬಲ್ಲೆ? ನೀನಿಟ್ಟಲ್ಲೆ
ತನುಮನವೆಲ್ಲ ನಿನ್ನದೆ ಎಲ್ಲ
ಕನಸೂ ಮನಸೂ ನಿನ್ನಯ ನೆನಸು
ಎಲ್ಲಿದ್ದಲ್ಲಿ ನಿನ್ನದೆ ನೆನವು
ಎಲ್ಲಿದ್ದಲ್ಲಿ ನಿನ್ನದೆ ಒಲವು
ನಿನ್ನನು ಉಳಿದು ನಾನಿರಲಾರೆ
ನನ್ನನ್ನು ತೊರೆಯೆ ಉಳಿಯಲಿ ಅರೆ
ನನ್ನಿಚ್ಛೆಯಲಿ ನಡೆಯಲು ಬೇಕು
ನನ್ನಿಚ್ಛೆಯನು ತಡೆಯಲೆ ಬೇಕು
ನಾನಿದನೆಲ್ಲ ಬಲ್ಲೆನು ತಾಯೀ
ನೀನಿದನೆಲ್ಲ ತಿಳಿಸಿಹೆ ತಾಯೀ
ತಿಳಿದೂ ತಿಳಿದೂ ನನ್ನಯ ನಡತೆ
ಅಳವನು ಮೀರಿ ಹರಿವುದು ಮಾತೆ
ನೀನೇ ತಾಯಿ ಎನ್ನನು ಕಾಯೆ
ನೀನೇ ಇದಕೆ ಉಪಾಯವನೊರೆಯೆ
ಜಗದಲಿ ಬಂದು ನಿಮ್ಮನು ಅರಿತೆ
ಜಗದೀಶ್ವರ–ಜಗದೀಶ್ವರಿ ಮಾತೆ
ನಿಮ್ಮಯ ಕೃಪೆಯಿಂ ನಿಮ್ಮನು ಅರಿತೆ
ಅಮ್ಮಾ ಇನ್ನೂ ನನಗಿದೆ ಕೊರತೆ

ನನ್ನನು ನಾನು ಅರಿತೇ ಇಲ್ಲ
ನನ್ನಯ ಹೊಲಬು ತಿಳಿದೇ ಇಲ್ಲ
ಆತ್ಮನು ನಾನು ಇದು ಸರಿ ತಾನು
ಆತ್ಮರು ಯಾರು ಅಲ್ಲೌ ಸಾರು?
ಎಲ್ಲರು ಆತ್ಮರು ನಾನೂ ಆತ್ಮಾ
ಎಲ್ಲರು ಜೀವರು ನಾನೂ ಜೀವಾ
ಎಲ್ಲರು ಮನುಜರು ನಾನೂ ಮನುಜಾ
ಎಲ್ಲರು ಏನೋ ನಾನದು ತಾನೆ
ಇಂಥಾ ಜ್ಞಾನಾ ಏನದು ತಾನಾ
ಇಂಥಾ ಮಾತು ಯಾತಕೆ ಬಂತು?
ಜಗದೀ ನಾಟಕಶಾಲೆಯ ಒಳಗೆ
ಜಯತಿಯೆ ! ಪಾತ್ರವು ಯಾವದು ನನಗೆ?
ತಾಯೇ ನಾನಾವುದಕಿಹೆ ಪಾತ್ರ?
'ಮಾ'ಯೇ ತಿಳಿಸೀ ಜೀವನಸೂತ್ರ
ನನ್ನಯ ಜೀವನ ಸೂತ್ರವ ತಿಳಿಸು
ನನಗಾ ಪಥದಲಿ ನಡೆಯಲು ಕಲಿಸು
ನನ್ನಯ ಪಾತ್ರದ ಅರಿವನು ನನಗೆ
ಚಿನ್ಮಯೆ ಕೃಪೆಯಿಂ ಕರುಣಿಸು ಈಗ್ಗೆ
ನೀನೇ ಎನ್ನಯ ಗತಿಯೂ ಮತಿಯೂ
ನೀನೇ ಎನ್ನಯ ಬೀದಿಯ ಬೆಳಕೂ
ನಿನ್ನನು ಬಿಟ್ಟು ನಾನಿರಲಾರೆ
ನನ್ನನು ಬಿಡದಿರು ನನ್ನಾಧಾರೆ
ನೀ ಕೈಹಿಡಿದರೆ ನಾನುಳಿದೇನು
ನೀ ಕೈಬಿಟ್ಟರೆ ಏನಾದೇನು !!
ಕಾಯೌ ತಾಯೆ ಕಾಯೌ ತಾಯೇ
ಕಾಯೌ ಸದಯೆ ವರಗುಣ ನಿಲಯೇ

## ೩೩. ಜೀವನ

ಓಂ ಜಯ ತಾಯೇ ಓಂ ಜಯ ತಂದೇ
ಓಂ ಜಯ ಜಗತಃಪಿತರೌ ವಂದೇ
ಭ್ರಾತೃಗಳೀ ಲೋಕದ ಜನವೆಲ್ಲಾ
ಮಾತೃದೇವಿ ನಿನ್ನಯ ಸುತರೆಲ್ಲಾ
ಜಯ ಜಯ ಸಕಲಾ ! ಜಯ ಜಯ ನಿಖಿಲಾ !!
ಜಯ ಜಯ ಜನನೀ–ಜನಕರಲೀಲಾ

* * * *

ಏನೀ ಜಗದಲಿ ಇರುವುದರರ್ಥ ?
ಏನೀ ಜಗದಲಿ ಮಾಳ್ಪುದರರ್ಥ?
ಇರುವುದು ಜನನೀ–ಜನಕರ ಕೃಪೆಗೆ
ಇರುವುದು ಅವರಾ ಕೃಪೆಯ ನಲಿವಿಗೆ
ಇರುವುದು ಅವರಾ ಸೇವೆಯ ದೆಸೆಯಿಂ
ಇರುವುದು ನನ್ನಾ ಶುದ್ಧಿಯ ದೆಸೆಯಿಂ

* * * *

ಮಾಳ್ಪುದಕಿಲ್ಲಿ ಕಾರ್ಯಗಳೆನಿತೋ
ಮಾಳ್ಪುದು ಅವರಾ ಇಚ್ಛೆಯನರಿತೋ
ಮಾಳ್ಪುದು ನನ್ನಾ ಇಚ್ಛೆಗೆ ಅಲ್ಲ
ಮಾಳ್ಪುದು ನನ್ನಾ ಲಾಭಕೆ ಅಲ್ಲ
ಮಾಳ್ಪುದ ಬಿಟ್ಟು ನಡೆಯುವದಿಲ್ಲ
ಮಾಳ್ಪುದೆ ಅದರಿಂ ಶಾಸ್ತ್ರದ ಸೊಲ್ಲ

* * * *

ತನ್ನಯ ಲಾಲಸೆಗೆಸಗುವ ಕಾರ್ಯ
ತನ್ನಯ ಮನೆತನಕೆಸಗುವ ಕಾರ್ಯ
ತನ್ನಯ ಕುಲಕೆ ಗೆಯ್ಯುವ ಕಾರ್ಯ
ತನ್ನಯ ದೇಶಕೆ ಎಸಗುವ ಕಾರ್ಯ
ರಾಜ್ಯಕೆ ಧರ್ಮಕೆ ಮಾಡುವ ಕರ್ಮ
ಸತ್ಯದ ಪುಣ್ಯದ ನೀತಿಯ ಕರ್ಮ
ಕಾರ್ಯಗಳೆಷ್ಟೋ ಇಲ್ಲಿರುತಿಹವು
ಕಾರ್ಯಗಳಿಷ್ಟೂ ಆವರಿಸಿಹವು
ನನ್ನಯ ಕಾರ್ಯ ಸ್ವಾಮಿಯ ಕಾರ್ಯ
ನನ್ನಯ ಕಾರ್ಯ ದೇವನ ಕಾರ್ಯ
ನನಗಾ ಸ್ವಾಮಿ–ವಿಧಿಸುವ ಕಾರ್ಯ
ನನಗಾ ತಂದೆ–ಕಲಿಸಿದ ಕಾರ್ಯ

* * * *

ದೇವನ ಇರವು ಆತ್ಮನ ಅರಿವು
ಜೀವನ ಒಳಗಿನ ಶಕ್ತಿಯ ಅರಿವು
ಮಾತೆಯ ಅರಿವು ಪಿತನಾ ಅರಿವು
ಭ್ರಾತೃಗಳರಿವು ಸಾಧನೆಯರಿವು
ಇಂತೀ ಒಳಗಿನ ಅರಿವುಗಳರಿವು
ಸಂತತ ಕನ್ನಡದೊಳು ಬರೆವರಿವು
ಓಂ ಜಯ ತಾಯೆ ಓಂ ಜಯ ತಂದೇ
ಓಂ ಜಯ ಜಗತಃಪಿತರೌ ವಂದೇ

* * * *

ದೇವನುಂಟು ದೇವತೆಗಳು ಉಂಟು
ದೇವರು ದಿಂಡಿರು ಸಹ ಬಹಳುಂಟು
ಎಲ್ಲರ ಮೇಲೆ ಸ್ವಾಮಿಯು ತಾನು

ಅಲ್ಲದೆ ಸ್ವಾಮಿಯ ಶಕ್ತಿಯು ತಾನು
ಶಕ್ತಿಯೆ ತಾಯಿ ಸ್ವಾಮಿಯೆ ತಂದೆ
ಭಕ್ತಿ ಶಾಂತಿಗಳ ನೆಲೆಯಿವರೆಂದೆ
ಶಾಂತನ ಇಚ್ಛೆಯ ನಿಧಿಯೇ ಶಕ್ತಿ
ಇಂತಿವರೇ ಹೆಚ್ಚಿನ ಶಿವಶಕ್ತಿ
ಇವರಂಶಕೆ ಆ ದೇವಾಧಿಕರು
ಅವರು ವಿಶ್ವಕಾರ್ಯದಿ ತತ್ಪರರು
ಅಂಶರಲ್ಲಿ ಆತ್ಮಾಂಶರು ಬೇರೆ
ಅಂಶರಲ್ಲಿ ಜೀವಾಂಶರು ಬೇರೆ
ಆತ್ಮಾಂಶರು ಆತ್ಮರ ಜಗಗಳಲಿ
ಜೀವಾಂಶರು ಜೀವರ ಜಗಗಳಲಿ
ಆತ್ಮಾಂಶರು ಆತ್ಮನ ಹಿತಕಾಗಿ
ಜೀವಾಂಶರು ಜೀವನ ಹಿತಕಾಗಿ
ದಿವ್ಯ ಜೀವನಕೆ ಮಾತಾಪಿತರು
ದಿವ್ಯ ಜೀವನಕೆ ಇವರೇ ಇವರು

* * * *

ಆತುಮವೆಂದರು ಸ್ವಾಮಿಯ ಅಂಶ
ಆತುಮದಲೆ ಸರ್ವಸಮಾವೇಶ
ಆತ್ಮನ ಮೂಲಕ ಭ್ರಾತರು ಜನರು
ಆತ್ಮರಿಗೆಲ್ಲಾ ಇಬ್ಬರೆ ಪಿತರು
ಪಿತರೆಂದರೆ ಶ್ರೀ ಮಾತಾಪಿತರು
ಪಿತಮಾತೆಯರಿಗೆ ಸರ್ವರು ಸುತರು
ಹುಡುಗರು ತರುಣರು ಬಲ್ಲವರೆಂದು
ಮಿಡಿಗಾಯ್ ಕಸುಗಾಯ್ ಹಣ್ಣಾಗಯ್ ಎಂದು
ಮಕ್ಕಳಿವರಿಗೆ ಮೂಬಗೆಯುಂಟು
ಮಕ್ಕಳೆ ಎಲ್ಲರು ಈ ಪರಿಯುಂಟು
ಹುಡುಗರಿಗಜ್ಞಾನವೆ ಅದು ಸಹಜ

ನಡುವಿನವರಿಗಲ್ಪಜ್ಞಾನ ನಿಜ
ಹಿರಿಯರಿಗೇ ಹಿರಿ ಜ್ಞಾನದ ಹುಟ್ಟು
ಹಿರಿತನಕೇ ಜಗ ಬಂದಂತುಂಟು

* * * *

ಹಿರಿಮಕ್ಕಳ ಈ ಘನತರ ಕಾಲ
ವರ ಪಿತರುಗಳೇ ತರಲಿಹ ಕಾಲ
ತಾಯ್ತಂದೆಗಳಿಂದೀ ಯುಗದಲ್ಲಿ
ಮಾಯಾ ಲೀಲೆಯ ಹರವಿಹರಿಲ್ಲಿ
ಅವರ ಲೀಲೆಯಾ ಪರಮ ರಹಸ್ಯ
ಅವರಿಂದಲೆ ಅರಿಯುವುದು ಅವಶ್ಯ
ಅವರ ಕೃಪೆಯ ಗಳಿಪುದೆ ಸಾಧನವು
ಅವರಿಚ್ಛೆಗೆ ಬಾಳ್ವುದೆ ಸಾಧನವು
ಅವರ ಹರಕೆಯಿಂದಲೆ ಪಥದರಿವು
ಅವರ ಆಶ್ರಯವೆ ಪಯಣಕೆ ವರವು

* * * *

ನಾವಾತ್ಮರು ಜೀವಕೆ ಪ್ರಭುವರರು
ಜೀವಗುಣವ ಗೆದಿಯುವ ಹೊಣೆಯವರು
ನಮಗೆ ಹೊರಿಸಿದೀ ಹೊಣೆಯನು ಗಡನೆ
ಸಮಯ ಮೀರದಲೆ ತೀರಿಸಲೊಡನೆ
ಜನನೀ ಜನಕರು ತಮ್ಮಯ ತೇಜ
ಅನುಮತದಿಂದೆಮಗೀವರು ಸಾಜ
ಇದುವೇ ಗುರಿಯೂ ಇದುವೇ ಸಿರಿಯೂ
ಇದುವೇ ನನಗಿಹ ಕಾರ್ಯದ ಪರಿಯು
ಜಯಜಯ ತಾಯೇ ಜಯಜಯ ತಂದೇ
ಭಯರಹಿತನ ಮಾಡಿರಿ ನನಗಿಂದೇ

* * * *

ನನ್ನಯ ಆಶೆಗೆ ನೀವಾಧಾರ
ನನ್ನಯ ಜನ್ಮಕೆ ನೀವ್ ಕೈವಾರ
ನೀವಾಧಾರ ನೀವೇ ಪೂರಾ
ನೀವೇ ಎನ್ನಯ ಸೂತ್ರಧಾರಾ
ನೀವೇ ಎನ್ನಯ ಗತಿಮತಿ ಪೂರಾ
ನೀವೇ ನನ್ನನು ನಡಿಸಿರಿ ಪೂರಾ
ಪೂರಾ ಪೂರಾ ನೀವೇ ಪೂರಾ
ಪೂರ್ಣಾತ್ ಪೂರ್ಣಮಿದಂ ಪರಿಪೂರಾ

## ೩೪. ಅಭೇದ

ತಾಯಿಯೆ ತಂದೆ– । ತಂದೆಯೆ ತಾಯಿ
    ಈರ್ವರು ನಮಗೊಂದಾಗಿಹಿರಿ
ತಾಯೇ, ತಂದೇ, । ನಿಮ್ಮೊಳು ಭೇದವ
    ಗೈಯುವ ಬುದ್ಧಿಯ ತೊಲಗಿಸಿರಿ ೧

ಒಂದೋ ಎರಡೊ । ನೀವೇ ಬಲ್ಲಿರಿ
    ಶಿಶುಗುಣ ಪೊರೆಯಲು ಬಂದಿಹಿರಿ
ಒಂದಿದ್ದೂ ಸಹ । ಎರಡಾಗಿಹಿರಿ
    ಎರಡಾಗಿಯು ಒಂದೇ ಇಹಿರಿ ೨

ಕs ವೇ ಖs ವು । ಖs ವೇ ಕs ವು
    ಶ್ರುತಿಧರರೊಡೆದಿಹಿರೀ ಒಗಟು
ಕs ವೇಂ ? ಖs ವೇಂ? । ಕs ಖ–ಗs ಘ–
    ಓ–ಬಧಿರರಿಗೆಲ್ಲಿಯ ಒಡಪು? ೩

ಅದುವೂ ಪೂರ್ಣಂ । ಇದುವೂ ಪೂರ್ಣಂ
    ಪೂರ್ಣದಿಂದ ಪೂರ್ಣದ ಹುಟ್ಟು
ಮುದದಿಂ ಪೂರ್ಣಕೆ । ಪೂರ್ಣವು ಕೂಡಲು
    ಪೂರ್ಣವೆ ಕಾಂಬುವ ಹಿರಿಗುಟ್ಟು ೪

ಒಂದೆಂಬುದರಲಿ । ಒಂದನೆ ಕೂಡಿಸಿ
    ಒಂದನೆ ಕಾಂಬುವದೀ ಚದುರಿ
ಒಂದೆಂಬುದರಲಿ । ಒಂದನೆ ಕಳೆದು
    ಒಂದನೆ ಕಾಣೆವು ನಮ್ಮಿದಿರು ೫

ಒಂದೂ ಅಹುದು । ಎರಡೂ ಅಹುದು
ಎಡಮೊಗ ಬಲಮೊಗವೆರಡೇನು ?
ಒಂದೂ ಅಹುದು । ಎರಡೂ ಅಹುದು
ಎಡಬಲಗೈ ಎರಡಲ್ಲೇನು ? ೬

ಒಬ್ಬರು ಆತ್ಮನು । ಒಬ್ಬರು ಜೀವಳು
ವ್ಯಕ್ತಕೆ ಈರ್ವರು ಆಧಾರಾ
ಇಬ್ಬರು ದಿವ್ಯರು । ಇಬ್ಬರು ಭವ್ಯರು
ನಿಮ್ಮಿಂದಲೆ ಜಗದುದ್ಧಾರ ೭

ತಾಯಿಯೆ ತಂದೆಯು । ತಂದೆಯೆ ತಾಯಿಯು
ಈರ್ವರು ನಮಗೊಂದಾಗಿಹಿರಿ
ತಾಯೇ, ತಂದೇ, । ನಿಮ್ಮೊಳು ಭೇದವ
ಗೈಯುವ ಬುದ್ಧಿಯ ತೊಲಗಿಸಿರಿ ೮

## ೩೫. ಕ್ಷಮಾಯಾಚನೆ

ತಾಯಮ್ಮ ಮುನಿಸು ತಾಳಿದೆ ನಿನ್ನ ಮೇಲೆ
ತಾಯಮ್ಮ ಮುನಿಯದಿರು ನೀನೆನ್ನಮೇಲೆ
ಮುನಿಯದಿರು ಮುನಿಯದಿರು ಶ್ರೀ ಲೋಕಮಾತೇ
ಘನಕೃಪಾನಿಧೀ ನೀನು ಕ್ಷಮಿಸೆನ್ನ ಪ್ರೀತೇ
ಮನವ ತಡೆಯದುದಕ್ಕೆ ತನು ಕೆಡುತಲಿರಲು
ಮನವ ತಡೆಯುವೆನೆಂದು ನಾ ಬಗೆಯುತಿರಲು
ತನುತಾಪ ಮಿಗಿಲಾಗೆ ಮನತಾಳ ತಪ್ಪಿ
ಜನನಿ ಜನಕರ ಮೇಲೆ ಅನುತಾಪ ಹೆಚ್ಚಿ
ಕೃಪೆಯೆನ್ನ ಮೇಲೆ ನೀವಿಟ್ಟಿಲ್ಲವೆಂದೆ
ಕಪಿಯಂತೆ ಕಟುತರ್ಕ ಜಾಲವನು ಹೆಣೆದೆ
ನೀವು ಜೀವರ ನಿರಂಕುಶ ಧನಿಯರೆಂದೆ
ನಾವು ನಿರುಪಾಯ ಜೀವಿಗಳು ಪ್ರಜರೆಂದೆ
ಹದಿನಾರು ವರುಷಗಳ ಹಿಂದೊಮ್ಮೆ ಹೀಗೇ
ಹದತಪ್ಪಿ ಸಲಿಗೆಯಾ ಸಲ್ಲಾಪಗೈದೆ
ಆಗೆನ್ನ ಕ್ಷಮಿಸಿದಿರಿ ಸಣ್ಣ ಕೂಸೆಂದು
ಈಗಲೂ ಕ್ಷಮಿಸಿರೌ ಇನ್ನು ಮಗುವೆಂದು
ಅಪರಾಧ ಗೈಯುವದಕಳತೆ ನನಗಿಲ್ಲ
ಅಪರಾಧ ನೀವೆಣಿಸೆ ನನಗೆ ಉಳಿವಿಲ್ಲ
ಕ್ಷಮಿಸೆನ್ನ ತಾಯಮ್ಮ ಕ್ಷಮಿಸೆನ್ನ ತಾಯೀ
ಕ್ಷಮಿಸವ್ವ ಕ್ಷಮಿಸವ್ವ ಕ್ಷಮಿಸೆನ್ನ ಕಾಯೇ
ಅಪರಾಧ ಕ್ಷಮೆಗಾಗಿ ಗೈದೆನೀ ಸ್ತೋತ್ರ
ಅಪಕಾರ ಮನ್ನಿಸೌ ಕ್ಷಮೆಗಾರ್ತಿ ಸುತರಾ
ಕ್ಷಮಿಸೆನ್ನ ಸಂತಯಿಸಿ ಹರಸೆನ್ನ ತಾಯೀ
ಸುಮನಸಳೆ ಸುತನನ್ನು ಸಂತವಿಸು ದೇವೀ

## ೩೬. ಅರ್ಪಣ

ನನ್ನಯ ಜನ್ಮವು ನಿಮಗೇ
ನನ್ನಯ ಮನ–ದೇಹ–ಧನಗಳೆಲ್ಲವು ನಿಮಗೇ
ನನ್ನಯ ಶಕ್ತಿಯು ನಿಮಗೇ
ನನ್ನಯ ಹೊರವೊಳಗೆಲ್ಲ ಅರ್ಪಿತ ನಿಮಗೇ ೧

ಮನ ನಿಮಗರ್ಪಿತವಾಗಲು
ಮನದಿಂ ಸಲೆ ನಿಮ್ಮದಲ್ಲದನ್ಯವನೊಂದುಂ
ಅಣು ಸಹ ಅರಿಯಲು ಬಾರದು
ಅನುದಿನ ನಿಮಗಲ್ಲದುದ ವಿಚಾರಿಪುದಲ್ಲಂ ೨

ಧನ ನಿಮಗರ್ಪಿತವಾಗಲು
ಕ್ಷಣ ಸಹ ನಿಮಗಲ್ಲದುದಕೆ ದುಡಿಯುವುದಲ್ಲಂ
ಎನಿತುಂಟೊ ಬಳಿಯೊಳನಿತುಂ
ಘನ ಮಹಿಮರೆ ನಿಮ್ಮ ಸೊತ್ತು ಇದೆ ಸತ್ಯಪಥಂ ೩

ಕಾರ್ಯಾರ್ಪಿತವಾಗಲು ತಾ
ಕಾಯದ ಕಳವಳಕೆ ಬೆಂದು ಬಾಳುವುದಲ್ಲಂ
ಸಾಯ್ವುದನೆ ನೆನಿಸಿ ಕುದಿಯದೆ
ಸಾಯದ ಸವಿ ಅಮೃಕೆಳಸಿ ಹರ್ಷಿಪುದೆಲ್ಲಂ ೪

ನಿಮ್ಮದು ತನು ನಿಮ್ಮದು ಮನ
ನಿಮ್ಮದು ಧನ ಜೀವಜೀವಿತಾದಿಗಳೆಲ್ಲಂ
ನಿಮ್ಮವೆ ಕನಸಿನೊಳುಂ ಸಹ
ಕಮ್ಮನೆ ತಾನಿದುವೆ ನಿತ್ಯಪಥ ನಿಜಪದಕೆ ೫

## ೩೭. ಸಂಧ್ಯಾ

ಗಿಡಮರೆದೆಲೆಗಳು ಕೈಮುಗಿದಯುವವು
ಗುಡಿಯೊಳು ಭಕ್ತರ ಶಿರಬಾಗುವವು ೧

ಹೂಗಿಡಗಳ ಎದೆ ಹೂವರಳುವವು
ಅಗಸದಲಿ ತಾರಗೆ ಮೂಡುವವು ೨

ಪಡುವಣದಲಿ ಆರತಿ ಬೆಳಗುವದು
ಪೊಡವಿಯೆ ಸಿರಿನಾಳನು ಕೋರುವದು ೩

ದಿನಪತಿ ಮರೆವನೊ ತಮ್ಮನು ಎಂದು
ಮನದಲಿ ಜಡಚೇತನಗಳ ನೊಂದು ೪

ಹೃದಯದ ಹಿರಿಯಾಶೆಯ ಸವಿನೋವು
ಪದುಳದಿ ಹರಡಿದೆ ಕೇಸರಿ ಠೀವು ೫

# ೩೮. ಅನಾದ್ಯನಂತ

ಶಾಶ್ವತ ತಾಯೆ ಅ–ನಂತಾ ತಂದೇ
ಸ್ವರೂಪ ನಿಮ್ಮದು ಭವ್ಯವಿದು
ವಿಶ್ವಾಂತರ್ಯೆ ವಿಶ್ವಾಧಾರಾ
ಲೀಲೆಯು ನಿಮ್ಮದು ದಿವ್ಯವಿದು ೧
    ಶಾಶ್ವತ "ಜೀವಂ" ಅನಂತ ಆತ್ಮನು
    ದೇಹದಲ್ಲೆ ದೇಹಿಗಳಿವರು
    ವಿಶ್ವದಲ್ಲಿ ಶಿವ–ಶಕ್ತಿಯರಿಬ್ಬರು
    ಅಗಲದೆ ಎಂದಿಗು ಇದ್ದವರು ೨
ಒಬ್ಬನೆ ಎಂಬೆವು ಏಕಂ ತತ್ವಂ
ಇಬ್ಬರೆಂಬುದತಿ ಗೂಢವಿದು
ಒಬ್ಬನಶಕ್ಯನು ನಾಸ್ತಿಕವಾದಿಗೆ
ಇಬ್ಬರ ಬಿಗಿ ಏಕೇಶ್ವರಿಗೂ ೩
    ಒಬ್ಬನೆ ಇರುತಿರೆ ಏಕಾಕಾರಂ
    ಏಕದ ಗುಣಿತವು ಏಕೈಕಂ
    ಇಬ್ಬರ ಕಾರಣ ಅಖಿಳೈಶ್ವರ್ಯಂ
    ಈರ್ವರಿಂದ ಪೂರ್ಣಾತ್ಪೂರ್ಣಂ ೪
ತಾಯಿಯು ಹೃದಯಂ ತಂದೆಯ ಶೀರ್ಷಂ
ಈರ್ವರ ಐಕ್ಯದೊಳೇಕಾಂಗಂ
"ಮಾಯಿನಂತು ಮಾ–ಹೇಶ್ವರ"ನೆಂಬುದು
ಶ್ವೇತಾಶ್ವರದ ಶ್ರುತಿಯಂಗಂ ೫
    "ಶಿಶುವಿನ" ಪದ್ಯವು ನಲ್ಮೆಯ ನೆಲೆಯಿದು
    ಬುದ್ಧಿಗೆ ಚಂದ್ರನ ಚರ್ಚಿತವು
    ಮಿಸುನಿಗು ಬಣ್ಣಕು ಬೆಸೆದಂತಿರುವಾ
    ಜನನೀ ಜನಕರ ಸಂಸ್ತವವು ೬

## ೩೯. ಕಾವ್ಯಕರ್ಮ

ಆನಂದಂ ಬ್ರಹ್ಮವೈಸೆ
ನೀನರಿಯೈ ರಸೋವೈಸಃ
ಕಾವ್ಯಕ್ಕಾಧಾರನೀತಂ
ದಿವ್ಯಾತ್ಮಾ ಕೇಳು ಸತ್ಯಂ ೧

ಆನಂದಂ ಬೇಕು ತನ್ನೊಳ್
ಏನಂದಂ ವಾಣಿಯಾಗಳ್
ಉದ್ರೇಕಂ ಕ್ಲೇಶಮೂಲಂ
ಉದ್ರಿಕ್ತಂ ಕಾವ್ಯ ಬೇಡಾ ೨

ಸತ್ಯಾತ್ಮಾ ಶಾಂತಚಿತ್ತಂ
ಅತ್ಯಂತಂ ಸೌಖ್ಯಯುಕ್ತಂ
ಇಂತಿಲ್ಲೀ ಸ್ಫುರಿತ ಕಾವ್ಯಂ
ಶಾಂತಾತ್ಮಾ ಸುಜನ ಶ್ರಾವ್ಯಂ ೩

ಚಿದ್ಗಗನಂ ಭವ್ಯ ಛತ್ರಂ
ಹೃತ್ಕುಮುದಂ ರಮ್ಯ ಪೀಠಂ
ಸತ್ಯವಿತಾದೇವಿಗಿಂತೋಂ
ಚಿತ್ಕುಸುಮಾರಾಮ ತಾಣೋಂ ೪

ಪೇಳ್ದರ್ಗಂ ಭವ್ಯ ಸೌಖ್ಯಂ
ಕೇಳ್ದರ್ಗಂ ದಿವ್ಯ ಸೌಖ್ಯಂ
ಈವರ್ಗಂ ಕಾವ್ಯಕರ್ಮಂ
ಸರ್ವತ್ರಂ ಶಾಂತಿಪರ್ವಂ ೫

## ೪೦. ಯಾಮಿನೀ

ಅಂತರ್ಲೀನಂ ವಿಶ್ವಂ
ಶಾಂತಂ ಸ್ವಾಂತಂ ಸುಖದಂ
ಸರ್ವಂ ಶಾಂತಾಕಾರಂ
ಪರ್ವಂ ಸುಮಹಾಪರ್ವಂ ೧

ಯೋಗಾರಾಮ ವಿರಾಮಂ
ಯೋಗಾರೂಢಂ ನಿಖಿಲಂ
ನಿದ್ರಾಲೋಲಂ ಜೀವಂ
ಭದ್ರಂ ಬಾಹ್ಯಾಂತರ್ಯಂ ೨

ತಾರಾಕಾಂತಿ ಸುಮಂದಂ
ದೂರಂ ನೈಶಾ ಛಂದಂ
ಚಂದ್ರಂ ಶಾಂತಂ ಶೀತಂ
ಸಾಂದ್ರಂ ಜ್ಯೋತ್ಸ್ನಾಪೂರಂ ೩

ಸ್ವಪ್ನಂ ದಿವ್ಯಂ ಮಧುರಂ
ಪ್ರಾಪ್ತಂ ಪ್ರಾಪ್ಯಂ ಭವ್ಯಂ
ಲಬ್ಧಂ ಗುಪ್ತಂ ತಥ್ಯಂ
ಸ್ತಬ್ಧಂ ಶಬ್ದಂ ನಿತ್ಯಂ ೪

ಗಾಢಂ ಕೃಷ್ಣಂ ಗೂಢಂ
ಪ್ರೌಢಂ ಗೋಪನ–ವೃತ್ತಂ
ಮಂದ್ರಂ ಕೌಮುದಿ ರಮ್ಯಂ
ಬೃಂದಾಬನ ಸುಖನೃತ್ಯಂ ೫

## ೪೧. ಜೀವನಸೋಪಾನ

ಹಡೆಯವ್ವಾ ತಂಗಿ ಹಡೆಯವ್ವಾ
ಹಡೆದವ್ವಾ ಕೇಳು ಹಡೆದವ್ವಾ
    ಹಡೆಯುವದು ಇಲ್ಲಿ ಹಿರಿ ಕೆಲಸಾ
    ಬಿಡದು ಇದು ಯಾವದಕು ಸಹಸಾ
    ಇದರಿಂದೆ ಜಗವು ಅಕ್ಷಯವು
    ಅದಕೆಂತೇ ಇದಕೆ ಅತಿ ಛಲವು ೧

ನಡೆಯವ್ವಾ ಅಕ್ಕ ನಡೆಯವ್ವಾ
ಹಡೆದವ್ವಾ ಕೇಳು ಹಡೆದವ್ವಾ
    ನಡೆಯುವದು ಬಹಳ ಹಿರಿ ಕಾರ್ಯ
    ನಡೆಯೆಂದೇ ನುಡಿಯುತಿದೆ ತೂರ್ಯ
    ನಡೆದರೆಯೇ ಜಗದಿ ಹೊಸಹೊಸದು
    ನಡೆ ಅದಕೇ ಇದನು ನೀ ತಿಳಿದು ೨

ಪಡೆಯವ್ವಾ ತಾಯಿ ಪಡೆಯವ್ವಾ
ಹಡೆದವ್ವಾ ಕೇಳು ಹಡೆದವ್ವಾ
    ಪಡೆವುದರಾ ಸುಖಕೆ ಮಿತಿಯಿಲ್ಲಾ
    ಪಡೆದವರಾ ಕತೆಗೆ ಇತಿಯಿಲ್ಲಾ
    ಪಡೆದವರೇ ಜಗದ ತಾರಕರು
    ಕಡೆತನಕಾ ಇರಲಿ ಈ ಉಸಿರು ೩

# ೪೨. ಗದ್ದರಣೆ

ಬಿಂಕಾ ಬಿಂಕಾ
ಬಿಡು ಬಿಡು ಬಿಂಕಾ
ಎಲ್ಲಿಯ ಬಿಂಕಾ
ಯಾತರ ಬಿಂಕಾ
ಬಿಂಕದ ಮಂಕಾ
ಬಿಡು ಬಿಡು ಬಿಡು ಬಿಂಕಾ
ಏಷಾ ದೈವೀವಾಗನುವದತೀ–
ಸ್ತನಯಿತ್‌ನುರ್ದಡಡ ಇತೀ ೧
ಬಾಯಿಲೆ ಬೀರಾ
ಯಾ ಅವತಾರಾ
ನೋಡುವೆ ಬಾರಾ
ಎಲ್ಲಿದೆ ಧೀರಾ
ಘನ ಟಂಕಾರಾ
ಬಿಡು ಬಿಡು ಹಂಕಾರಾ
ಏಷಾ ದೈವೀವಾಗನುವದತೀ–
ಸ್ತನಯಿತ್‌ನುರ್ದಡಡ ಇತೀ ೨
ರಾವಣ ರಂಕಾ
ಎಲ್ಲಿದೆ ಲಂಕಾ
ಬಿಲ್ಲಿನ ಟಂಕಾ
ಬಿಡಿಸಿತು ಬಿಂಕಾ
ರಾಮನ ಡಂಕಾ
ಗಡಗಡ ಬಿಡು ಬಿಂಕಾ
ಏಷಾ ದೈವೀವಾಗನುವದತೀ–
ಸ್ತನಯಿತ್‌ನುರ್ದಡಡ ಇತೀ ೩

## ೪೩. ಮಾವಿನಗೊಲ್ಲೆ

ನಾವು । ದೇವನ ದೇಟಿನ ಕಾಯಿಗಳು
ಎಲ್ಲಾಽ । ಒಂದೇ ದೇಟಿನ ಮಾವುಗಳು

ಎಲ್ಲಾ ಪ್ರಾಣಿಗಳು
ಎಲ್ಲಾ ವಸ್ತುಗಳು
ಎಲ್ಲಾ ಎಲ್ಲಾಽ ಎಲ್ಲಾಽ
ಎಲ್ಲಾಽ । ಒಂದೇ ದೇಟಿನ ಮಾವುಗಳು
ನಾವು । ದೇವನ ದೇಟಿನ ಕಾಯಿಗಳೂ

ಒಂದೋ ಬಲು ಹಿರಿದು
ಒಂದೋ ಅತಿ ಕಿರಿದು
ಚಿಕ್ಕದು ದೊಡ್ಡದು ಎಲ್ಲಾ
ಎಲ್ಲಾಽ । ಒಂದೇ ದೇಟಿನ ಮಾವುಗಳು
ನಾವು । ದೇವನ ದೇಟಿನ ಕಾಯಿಗಳು

ಒಂದೋ ಸವಿ ಹಣ್ಣು
ಒಂದೋ ಹುಳಿ ಹೀಚು
ಹಣ್ಣು ಹೀಚು ಎಲ್ಲಾ
ಎಲ್ಲಾಽ । ಒಂದೇ ದೇಟಿನ ಮಾವುಗಳು
ನಾವು । ದೇವನ ದೇಟಿನ ಕಾಯಿಗಳು

ಸಂಪ್ರೀತಿಯ ಸುರರು
ರೊಚ್ಚಿನ ರಕ್ಕಸರು
ಎಲ್ಲಾ ಎಲ್ಲಾಽ ಎಲ್ಲಾಽಽ
ಎಲ್ಲಾಽ । ಒಂದೇ ದೇಟಿನ ಮಾವುಗಳು
ನಾವು । ದೇವನ ದೇಟಿನ ಕಾಯಿಗಳು

## ೪೪. ಸುಖಜೀವನ

೧

ತಲಿಮ್ಯಾಲ ಹೊರಿಯೊಂದ । ಬಗಲಾಗ ಕೂಸೊಂದ
ಬಂದಾಳ ಬಾಲಿ ಬಂದಾಳ । ಹೊಲದಿಂದ ಬಂದಾಳ ॥ಪ॥

ಮಗಳೊಂದು ಮುಂದ ಮುಂದ । ಕೈಯಾಗ ಆಡೊಂದ
ಮನಿಯಾಗ ಮರಿಯೊಂದ । ಮರಿಮ್ಯಾಲ ಮನಸೊಂದ
ಮನಸೆಲ್ಲ ಮನಿಯಾಗ । ಕೆಲಸೆಲ್ಲ ಹೊಲದಾಗ
ಲಗಬಿಗಿ ಬರವುದಕ । ಮರಿ ಬಂದು ಬಾಗಿಲಕ
ಕುರಿ ಹೋಗಿ ಮರಿ ನೆಕ್ಕಿ । ತಾ ಶಿಶುವ ಮುದ್ದಿಕ್ಕಿ
ಕರಿಗೊಂಬಿ ಕಟಗೀದ । ಮಗಳೋಡಿ ಎತಗೊಂಡ
ಕೈಯಾಗ ಕರಿಗೊಂಬಿ । ಮನದಾಗ ಖುಷಿ ತುಂಬಿ
ಕುರಿ ಕಚ್ಚಿ ಎಳಿಹುಲ್ಲ । ಮರಿ ಕುಡಿದು ಮಲಿಹಾಲ
ಸಂಜೀಯ ಹೊಟ್ಟೇಗಿ । ಮುಂಜಾಳೆ ಮಾಡಿಹಳ
ಮಕ್ಕsಳು–ಮರಿವುಂಡು । ಚಕ್ಕsನೆ ತಾವುಂಡು
ಹಾಸೀಗಿ ಹಾಸಗೊಂಡು । ಮೆತ್ತಗೆ ಮಲಕೊಂಡು
ಗುರುವೀಗಿ ನೆನದಾಳ । ಹರನೀಗಿ ನೆನಸ್ಯಾಳ
ನೆನೆಯೂತ ನೆನಸೂತ । ನಿದ್ದೀಯ ಮಾಡ್ಯಾಳ
ನಿದ್ಯಾಗ ಹೊಲವಿಲ್ಲ । ನಿದ್ಯಾಗ ಮನಿಯಿಲ್ಲ
ಸುಖನಿದ್ದಿ ಬೆಳೆಯsಲಿ । ಸವಿಗನಸು ಬೀಳಲಿ

೨

ಕನಸು ಬಿತ್ತು ಬಾಲೆಗೆ । ಮನಸಿನೊಂದು ದೀವಿಗೆ
ಜಡೆಯ ಮುಡಿಯ ತಂದೆಯು । ನೋಡು ಮಗಳೆ ಎಂದನು
ಸ್ವಾಮಿ, ಶಿರವ ಬಾಗುವೆ । ಪ್ರೇಮಿ, ಕೈಯ ಮುಗಿಯುವೆ
ಹೊಲವು ಮನೆಯು ಯಾರವು । ನೆಲವು ಜಲವು ನಿನ್ನವು
ಸುಖದ ಶಿಶುವು ಯಾರದು । ಸಕಲ ಜೀವ ನಿನ್ನದು

ನಿನ್ನವಲ್ಲವೇತಕೆ । ನೀನೆ ತಂದೆ ಲೋಕಕೆ
ನೀನು ಒಡತಿಯಲ್ಲವೆ । ಪ್ರಾಣತೊತ್ತು ಅಲ್ಲವೆ ?
ಕೆಲಸ ಗೈವುದಿಲ್ಲವೆ । ಚಲನವಲನ ಬೇಡವೆ ?
ಸುಖಕೆ ನಲಿವುದಿಲ್ಲವೆ । ನಿಖಿಲ ಲೀಲೆ ಹೊಲ್ಲವೆ ?
ನಾನು ನಿನಗೆ ಮೆಚ್ಚಿದೆ । ಏನು ಬೇಕು ಹೆಚ್ಚಿಗೆ !

# ೪೫. ದಿವಸ್ಪತಿ

ಅಷ್ಟದಳ ಕಮಲವಿದು । ಎಂಟು ದಿಶೆಗಳ ಬೆಡಗು ॥
ನಟ್ಟ ನಡುವಿಳೆ ವಲಯ । ಮೂರು, ಕರ್ಣಿಕೆ ಮೇರು ॥

ತುಟ್ಟತುದಿಯಲಿ ತೂರ್ಯ । ಮಧ್ಯಮಹದಲಿ ಸೂರ್ಯ ॥
ಸೃಷ್ಟಿಚಕ್ರದ ಚೆಲುವು । ದೇವದೇವನ ನಲಿವು ॥

ಭೂಹೃದಯ ಕಮಲದಲ । ವಲಯ ಕರ್ಣಿಕೆಗಳಲಿ ॥
ಶ್ರೀಹಂಸ ಸಂಚರಿಪ । ಪರಿಪರಿಯ ಬೆಡಗಿನಲಿ ॥

ದ್ವಾದಶಾರಂಗಗಳಲಿ । ದ್ವಾದಶಾದಿತ್ಯ ಬರೆ ॥
ದ್ವಾದಶಸ್ಥಿತಿ, ನಾಲ್ಕ । ವಸ್ಥೆ ಭಾವಾಷ್ಟಕವು ॥

ಕರ್ಮಗಳು ಧರ್ಮಗಳು । ಬಗೆಬಗೆಯ ದುಡಿಮೆಗಳು ॥
ನಿರ್ಮಿತಿಗಳೆಡೆಬಿಡದ । ಬಹು ಕಾರ್ಯ ಕಜ್ಜಗಳು ॥

"ಭಾವಗಳು ರಾಗಗಳು । ಬಗೆಬಗೆಯ ಭೋಗಗಳು ॥
ಆವಾವವಲೆಯುವವು । ಮನುಜರೆದೆಯಾಳದೊಳು" ॥

ಸಾಕ್ಷಿಯೆಲ್ಲಕೆ ಈತ । ದಿವ್ಯ ತೇಜೋವಂತ ॥
ಚಕ್ಷುವೀತನೆ ಜಗಕೆ । ಅದಿತಿ ಮಾತೆಯ ಜಾತ ॥

ಸವಿತುರ್ವರೇಣ್ಯನೆಂ– । ದಿವನ ಕೊಂಡಾಡುವರು ॥
ನವಮತಿಗೆ ಬೆಳಕೆಂದು । ನಿಮಕ್ಷಿವರರು ನೆನೆಯುವರು ॥

## ೪೬. ರಮ್ಯಸೃಷ್ಟಿ

ಮಹಾಽಕಾಶ ಶಿರದ ಮೇಲೆ
ಆಹಾ–ಪೃಥ್ವಿ ರಮ್ಯ ಮುಂದೆ
ಬಾನುಭೂಮಿ ಅಪ್ಪಿದಲ್ಲಿ
ಏನು ರಮ್ಯ ದೂರದಲ್ಲಿ
ಪ್ರಭಾಮಯನು ವಿಭಾಕರನು
ನಭಾಂಗಣದಿ ವಿರಾಜಿಪನು
ಹಾಲು ಮೋಡ ಅಲ್ಲಿ ಇಲ್ಲಿ
ನೀಲಗಗನ ಅಲ್ಲಿ ಇಲ್ಲಿ
ಹೊನ್ನ ಬಿಸಿಲು ಸೂಸಿ ಸೂಸಿ
ರನ್ನನೆಲದಿ ಹಾಸಿ ಹಾಸಿ
ತರುವು ಹಸಿರು ಮರವು ಹಸಿರು
ಮೆರೆವ ಹುಲ್ಲು ಹಚ್ಚಹಸಿರು
ಮರದ ಸಾಲು ಮೇವ ಮೇಕೆ
ತೆರೆದ ಹಕ್ಕಿ ಏನು ಚೆಲುವು
ಎತ್ತು ಎಮ್ಮೆ ಆಡು ಆವು
ಚಿತ್ತಗೊಟ್ಟು ಮೇವ ಠೀವು
ಹೆಣ್ಣು ಗಂಡು ಕೂಸು ಕುನ್ನಿ
ದಿನ್ನಿ ದಿಬ್ಬ ಹಾದಿ ಬೀದಿ
ಏನು ಚಂದ ಏನು ಚಲುವು
ಏನು ಬೇಕು ಇದಕು ಮಿಗಿಲು
ಮಹಾಽಕಾಶ ಶಿರದ ಮೇಲೆ
ಆಹಾ–ಪೃಥ್ವಿ ರಮ್ಯ ಮುಂದೆ
ಬಾನುಭೂಮಿ ಅಪ್ಪಿದಲ್ಲಿ
ಏನು ರಮ್ಯ ದೂರದಲ್ಲಿ

## ೪೭. ಉಷಾದೇವಿ

ಬಂದಳು ಉಷೆಯು
ಬೆಳಗಿತು ದಿಶೆಯು
ಬಣ್ಣಬಣ್ಣಗಳ ಸಂಭಾರಂ
ಸುಂದರ ಮೊಗದಲಿ
ಪಾಟಲ ವರ್ಣದ
ದಿವ್ಯ ಪ್ರೇಮದ ಭಾಂಡಾರಂ

ಜರದಂಚಿನ ಸಿರಿ
ನೀಲಿಯ ವಸನಕೆ
ಒಪ್ಪುವ ನಗೆಹೂ ಅಲ್ಲಲ್ಲಿ
ಚರಣವ ಸ್ಪರ್ಶಿಪ
ಹಸುರಿನ ಕುತನಿಯ
ಹಡದಿಯ ಸಂಭ್ರಮ ಧರೆಯಲ್ಲಿ

ಜೀವ ಜಡಂಗಳ
ಹಿರಿಹಿಗ್ಗಿನ ಸೆಲೆ
ದಿನದ ವಸಂತದ ಸವಿ ಸಿರಿಯು
ದೇವ ದಿವಸ್ಪತಿ
ಜೀವ ವನಸ್ಪತಿ
ಗೆದೆಯೊಡಲು ಕಳಿಸಿದ ಹಿತೆಯು

ಬಣ್ಣದ ಜೋಗುಳ
ಬಣ್ಣದ ಲಾಲನೆ
ಬಣ್ಣಬಣ್ಣದಮೃತದ ಹಾಲು
ಕಣ್ಗಳ ತಣಿಸುವ
ಬಣ್ಗಳ ಹರಕೆಯು
ಮರ್ತ್ಯಕೆ ಅಮರತ್ವದ ಕುಕಿಲು

ಪರಮ ಪ್ರೇಮಮಯಿ
ಪರಮ ಪ್ರಕಾಶನ
ಪರತರ ಹಿರಿಕೃಪೆಯಾಗಾರಂ
ಧರಣಿಗೆ ದಿವವನು
ದಿನದಿನ ಸುರಿಸುವ
ಆದಿಮಾತೆ ಶಿವೆಸಾಕಾರಂ

ತಾಯಿಯ ಪೂಜೆಗೆ
ಶಿಶುಗಳ ಸಂಭ್ರಮ
ತುಂಬಿದ ಬಗೆ ಸುಮನಸರಾಗಂ
ಮಾಯಾ ಮಮತಾ
ದಿವ್ಯಾ ತುರತಾ
ನವ ನಿರ್ಮಲತಾ ಸುಖಯೋಗಂ

ಎಲೆಗಳ ನಲುಗು
ಉಲಿಗಳ ಮೊಳಗು
ಪ್ರದಕ್ಷಿಣೆಯ ಸವಿಸಂಚಾರಂ
ಎಲರಿನ ತಂಪು
ಅಲರಿನ ಕಂಪು
ಮೆಲ್ಲೆದೆಯಿಂಪು ನಮಸ್ಕಾರಂ

## ೪೮. ವಿರಾಟಶಕ್ತಿಯ ದರ್ಶನ

ಮಾತೆ ನಿಮ್ಮ ಶಕ್ತಿಯು ವಿಸ್ಮಯಕಾರಿ
ಅತಿ ಉಗ್ರವಿದ್ದೂ ಮೃದು ಭಾರೀ ॥ ಪ ॥

ಜ್ಞಾನಶಕ್ತಿ ಸಂವಾದ ಸುಸದ್ಧಿ
ನಾನು ಕಂಡೆ ನಿಮ್ಮೊಳಗೆ ಸಮೃದ್ಧಿ
ಅಂತೇ ಪೇಳುವೆ ನಾ ಸಾರಿ ೧

ಮಾಹೇಶ್ವರಿ ಮಾಯಾಳು ಮಾತೆ
ಮಹಾ ಸುಜ್ಯೋತಿ ಜ್ಞಾನ ಪ್ರದಾತೆ
ಮಾಡಿರುವಿರಿ ಮಹಾ ತಯ್ಯಾರಿ ೨

ಅಸುರರ ಇದಿರಿಗೆ ನೀವ್ ಮಹಾಕಾಳಿ
ದುಶ್ಯಕ್ತಿಗಳಿಂ ದಕ್ಷಾಕಾರಿ
ಖಳರಿಗೆ ಕಂಡಿರಿ ಭಯಕಾರಿ ೩

ಮಹಾಲಕ್ಷ್ಮಿಯಾ ಲೀಲೆಯ ತೋರಿ
ಆಹಾ ! ವೈಭವದಿ ಜಗ ಕುಣಿಸಿಹಿರಿ
ಕಂಡೆನು ಕಣ್ಣಿಗೆ ತೋರಿ ೪

ಮಹಾ ಸರಸ್ವತಿ ಸುಃವಿಧಾತೆ
ಮಹಾ ಕಲಾಕೌಶಲ್ಯದಾತೆ
ಶರಣಾಗತ ಶಿವಕಾರೀ ೫

## ೪೯. ಶ್ರೀ ಅರವಿಂದರು

ದಿವ್ಯ ಜೀವನ ದಾತಾರರನು । ಅವನಿಯಲಿ
ದಿವ್ಯ ಜೀವನದಾತಾರರನು ॥ ಪ ॥

ಕಂಡೆನು । ಸಮರ್ಥ ಶ್ರೀ ಅರವಿಂದರನು ॥ ಅ ಪ ॥

ಬುದ್ಧವೀರರೊಲು ಕರುಣಾಪರರು
ಕೃಷ್ಣಪ್ರಭುವಿನೊಲು ಸುಪ್ರೇಮಿಕರು
ರಾಮಚಂದ್ರನೊಲು ದೃಢನೇಮಿಕರು । ಯುಗಪ್ರವರ್ತಕರು ೧

ಮೃತ್ಯುವನಾಪೋಷಣ ಗೈದವರು
ಅಮೃತ ಜ್ಯೋತಿ ಮುಖದಲಿ ತಳೆದವರು
ದಿವ್ಯ ಸಮೃದ್ಧಿಗಳನು ಕೊಡುವವರು । ಕರುಣಾಸಾಗರರು ೨

ದರ್ಶನದಿಂ ಸಂಶಯ ಸುಡುವವರು
ಸ್ಪರ್ಶದಿ ಶ್ರದ್ಧೆಯ ನೆಲೆಗೊಳಿಪವರು
ಪದರಜದಿಂ ಪಾವನಗೊಳಿಪವರು । ತ್ರಿಲೋಕತಾರಕರು ೩

ಭವ್ಯರಿವರ ದರ್ಶನ ಗೈದವರು
ಪ್ರೇಮಾಮೃತ ಸಾಗರ ಕುಡಿದವರು
ಸುರವಾಂಛಿತ ಸಂಧಿಯ ಪಡೆದವರು । ಅಸೀಮಹರ್ಷಿತರು ೪

ಚೈತನ್ಯದ ಕಿಡಿ ಜಾಗ್ರತವಾಗಿ
ರೋಮ–ರೋಮದಲಿ ಪ್ರೇಮವು ತಾಗಿ
ಜನನ ಮರಣಗಳ ಭೀತಿಯ ನೀಗಿ । ಶಿವದರುಷನವಾಗಿ ೫

## ೫೦. ಪುರುಷೋತ್ತಮ

ದಿವ್ಯದೃಷ್ಟಿದಾಯಕರನು । ಕಲಿಯಲಿ
ಕಂಡೆನು ಶ್ರೀ ಅರವಿಂದರನು ॥ ಪ ॥

ಭಕ್ತಿಮುರಲಿರವ ಬಾಜಿಸಿತು
ಸತ್‌ಸಂಗಕೆ ಮನ ವೇಧಿಸಿತು
ನಾನೆ ಭಾಗ್ಯನೆಂದೆನ್ನಿಸಿತು ೧

ಮೂರುತಿಯಿದು ಮನಹಾರಕವು
ಸಿರಸಿರ ಸಮರಸ ಪೂರಕವು
ಪುರುಷೋತ್ತಮರವತಾರಕರು

ಜಗದ ತ್ರಿತಾಪ ನಿವಾರಕರು
ಮೃತ್ಯುವ ಮುದದಿಂ ಸ್ವಾಹಕರು
ಸಹಜದಿ ಶಿವಸುಖದಾಯಕರು ೩

## ೫೧. ಮಾತೆಗೆ ಮೊರೆ

ಮನಮಂದಿರದಲಿ ನೀ ಬಾರೇ
ಮಾಯಾಳು ಮಾತೇ ॥ ಪ ॥

"ಮೀರಾ ಮೀರಾ" ನೆನೆವೆ ನಿರಂತರ
ಮುಕ್ತಿಪ್ರದಾಯಕ ಮಾತೆಯ ಮಂತರ
ಮೆರೆವೀ ಭಕ್ತಿಯ ನರನರದಲಿ ಬೀರೇ ।
ಮಾಯಾಳು ಮಾತೇ ೧

ಎಲ್ಲಿ ಹರಿವುದೋ ನನ್ನಯ ದೃಷ್ಟಿ
ಅಲ್ಲಿ ಕಾಂಬೆ ನಿಮ್ಮಯ ತನುಸೃಷ್ಟಿ
ನಿಲ್ಲದೆ ಈ ನಲಿವನು ನೀಡಿರಿ ಧೀರೇ ।
ಮಾಯಾಳು ಮಾತೇ ೨

"ನಿಮ್ಮ ಧ್ಯಾನದಲಿ ನನ್ನನು ಮರೆವೆ
ತನ್ಮಯದಿಂ ಗುಣಗಾನದಿ ಬೆರೆವೆ"
ಅಮ್ಮಾ, ಈ ದುರ್ಲಭದಶೆಯನು ತಾರೇ ।
ಮಾಯಾಳು ಮಾತೇ ೩

ಸಮತಾ, ಸ್ಥಿರತಾ, ನವನಿರ್ಮಲತಾ,
ಶ್ರದ್ಧಾ, ಶಾಂತಿ, ಅತೀ ಸರಳಿತಾ,
ಕಮನೀಯ ಈ ಗುಣಗಳ ಹೃದಯದಿ ಊರೇ ।
ಮಾಯಾಳು ಮಾತೇ ೪

ಅಶುದ್ಧಿ ತುಂಬಿದೆ ಅಂತರಂಗದಿ
ವಿಶುದ್ಧಗೊಳಿಸಿರಿ ತಾಯೆ ಕರುಣದಿ
ಪ್ರಸಿದ್ಧ ಶಿವಪದ ಯೋಗ್ಯ ಜೀವನ ತೋರೇ ।
ಮಾಯಾಳು ಮಾತೇ ೫

## ೫೨. ದಿವ್ಯಮಾತೆ

ಮಾತೆ, ನಿಮ್ಮ ಮೂರ್ತಿಯು ಮೋಹನಕಾರಿ
ಖ್ಯಾತೆ, ನಿಮ್ಮ ಅಣುರಚನೆಯೆ ಬ್ಯಾರಿ ॥ ಪ ॥

ಮೀರಾರೂಪದಿ ಬಂದಿರಿ ಜಗದಿ
ಮೂರುಲೋಕ ತಾರಕಲಿಪಿಪದದಿ
ಪ್ರಾಣಕ್ಕು ಮಿಗಿಲೆನಗಿಹಿರಿ ೧

ವಿಶಾಲ ವೃಕ್ಷದ ಸಾಗರದಂತೆ
ವಿಶಾಲ ಉತ್ತಮ ಉದಾತ್ತ ಚಿತ್ತೇ
ಎಂತು ಮರೆವೆನೆ ಮಾತೋಶ್ರೀ ೨

ದರುಷನ ಮಾತ್ರದಿ ಪಾಪವ ಕಳೆವಿರಿ
ನರಾಧಮರನೂ ಉದ್ಧರಿಸುವಿರಿ
ಶರಣಾದವರೆ ಸುವಿಚಾರಿ ೩

ಸುರತರುವಿನವೊಲ್ ಇಚ್ಛಿತದಾತೆ
ಪರಮ ದಿವ್ಯ ಜೀವನ ಸುವಿಧಾತೆ
ನಿಮ್ಮ ಭಕ್ತರೆ ಭಾಗ್ಯಶಾಲಿ ೪

ತಿನ್ನುವೆ ಉಣ್ಣುವೆ ಅಲೆಯುವೆ ನಲಿಯುವೆ
ನೆನೆಯುತ ನಿಮ್ಮನು ಮಲಗುವೆ ಕೂಡುವೆ
ಹರಕೆ ಕೊಡಿರಿ ಶಿವಕಾರೀ ೫

## ೫೩. ಅಗಾಧ ಅಚ್ಚರಿ

ನೋಡು ನೋಡು ಮಹಾತಾಯಿಯನೊಲವಿಂ
ನಯನಾಂಬುಜದೋಳ್ ನೇಹಸೂಸುತಿಹ ॥ ಪ ॥
ತನುಮನದಣುಗಳ್ ಶೀತಲವಾಗಿಹ ॥ಅ.ಪ.॥

ತಾಯಿಯ ಕಾಣಲು ತೆರೆವುದು ದೃಷ್ಟಿ
ಸುರಿವುದು ಹೃದಯದಿ ಅಮೃತ ವೃಷ್ಟಿ
ಕಾಂಬುದು ಆನಂದಮಯ ಸರ್ವಸೃಷ್ಟಿ ೧

ಅಗಾಧ ಅಚ್ಚರಿ ಕಣ್ಣಿಲೆ ಕಂಡೆನು
ಅನುದಿನ ಹರಿಯುವ ಅಮೃತದ ಸರಿಯನು
ಚೌರ್‍ಯಾಐಂಶಿ ಚಕ್ರವ ಭೇದಿಪ ತಾಯನು ೨

ಧರ್ಮಪಂಥಗಳ ಕಲಹ ಕುಸಿಯಿತು
ಮತಾಗ್ರಹಗಳ ಕ್ಲೇಶ ಕಳೆಯಿತು
ರಾಗರೋಷ ಮೇಣ್ ಮೋಹ ತೊಳೆಯಿತು ೩

ಜನನಿಯನ್ಯಾರ್‍ಯಾರೀಕ್ಷಿಸುತಿಹರೋ
ತಪ್ತಹೃದಯಕೆ ಶಾಂತಿಪಡೆವರೋ
ದುರ್ಲಭಜೀವನ ಧನಗಳಿಸುವರೋ ೪

ತಾಯಿಯನೀಕ್ಷಿಸಿ ಪಾವನನಾಗು
ಬಾಳ್ವೆಯ ನೀಡಲು ನೀನಣಿಯಾಗು
ಅರಿಯುತ ನೀ ಶಿವಸುಖಕೇ ಸಾಗು ೫

## ೫೪.* ಮೀರಾಮಾತೆ

ಮೀರಾಮಾತೆ ಮುಕ್ತಿದಾತೆ ತಮಗೆ ಶರಣುಬಂದೆನು
ಜಪಗೈವೆ ಹಗಲಿರುಳು ತಮ್ಮ ನಾಮವನ್ನು ॥ ಪ ॥

ಶ್ರದ್ಧಾಭಕ್ತಿ ವಿದ್ಯಾಕಲೆಗಳ ಐಕ್ಯ ಸಾಧಿಸಿ
ಸದ್ಧರ್ಮಮಾರ್ಗವನ್ನು ಪರಮ ಸರಲಗೊಳಿಸಿ
ಮುಕ್ತಿದ್ವಾರ ಮಾಡಿರುವಿರಿ ತಾಯಿ ಪಾಂಡಿಚೇರಿಯನು ೧

ಸಾಧುಗಳು ಹೇಳಿಹರು ಸಾಯೆ ಸ್ವರ್ಗವು
ಆ ಸ್ವರ್ಗಧಾಮ ತಮ್ಮ ಚರಣಗಳಲೆ ವಾಸವು
ಆ ಚರಣಗಳಿಗೆ ಅರ್ಪಿಸುವೆನು ಸರ್ವಸ್ವವನು ೨

ಗಂಗಾ ಯಮುನಾ ತಾಪಿ ತಮ್ಮ ಅಡಿಯಲಿರುವವು
ಶಂಕೆಯಿಲ್ಲದೆ ಸುಧಾರೂಪದಿಂದ ಹರಿವವು
ತವಚರಣ ನೆನೆವ ಮನವು ಶಾಂತಿಸರಸಿ ತಾನು ೩

ತವರಚನೆಗಳನು ದೇವತೆಗಳು ವರ್ಣಿಸಿ
ತವಶಿಶುಗಳ ಕಷ್ಟಗಳನು ಕಳೆವರೋಡಿಸಿ
ತವಚರಣದಲ್ಲಿ ಪಡೆಯಿತೆನ್ನ ಮನ ಶಾಂತಿಯನು ೪

ತವದರ್ಶನದಿ ಮನವು ಮಗ್ನವಾಗಿ
ಶಿವದಾಯಕ ಸಮತೆಯು ಸಹಜವಾಗಿ
ಆದಿವ್ಯಾಧಿ ಉಪಾಧಿಯಿಂ ದಾಂಟಿ ತಾನು ೫

---

* ೪೮ ರಿಂದ ೫೪–ಅನುವಾದಿತ ಪದ್ಯಗಳು.

## ೫೫. ಕೊಳಗಳ ನಾಡಿನೊಳಗಿಂದ

(ಪಾಂಡಿಚೇರಿಯಿಂದ ಬರುವಾಗ)

ಸುತ್ತಲೆಲ್ಲ ಹಸಿರು ಗುಡ್ಡ
ನಡುವೆ ಕನ್ನಡಿಯೊಲು ಕೆರೆಯು
ಮೇಲೆ ಹೊಳೆವ ಬಿಳಿಯ ಸೂರ್ಯ
ಏನು ರಮ್ಯವೋ, ಆಹಾ, ಏನು........... ೧

ಕೆರೆಯ ಒಳಗೆ ತೆರೆಯ ಲಹರಿ
ತಡಿಗೆ ಭತ್ತ ಪಯಿರು ಲಹರಿ
ಹೃದಯದೊಳಗೆ ಭಕ್ತಿ ಲಹರಿ
ಏನು ರಮ್ಯವೋ, ಆಹಾ, ಏನು............ ೨

ಮುಗಿಲಿನೊಳಗೆ ಬಿಳಿಯ ಮೇಘ
ಕೆರೆಗಳೊಳಗೆ ಬಿಳಿಯ ಹಕ್ಕಿ
ಮನಸಿನೊಳಗೆ ಬಿಳಿಯ ಹರುಷ
ಏನು ರಮ್ಯವೋ, ಆಹಾ, ಏನು............. ೩

## ೫೬. –ಗೆ

ದೇವಲೋಕದ ಜಾಣೆ । ಭಾವಲೋಕದ ರಾಣಿ
ಯಾವಲೋಕವ ನೋಡಿ ನಕ್ಕುನಲಿವೆ
ಭಾವಗೀತಿಯ ಬೆಡಗ । ದೇವಸಂಗೀತದಲಿ
ಹಾವಭಾವಗಳಿಂದ ಹಾಡಿ ಅಳುವೆ ೧

ದೇವಲೋಕದ ನೆನಪು । ಭಾವಲೋಕಕೆ ಬರಲು
ಸಾವಿತ್ರಿ ಗಾಯಿತ್ರಿ ನಕ್ಕುನಲಿವೆ
ಭಾವಲೋಕದ ಗಾಳಿ । ಜೀವವೇಣುವ ತುಂಬೆ
ಶ್ರೀವರನ ತಾನಗಳನೆತ್ತಿ ಅಳುವೆ ೨

ಭವಭಾವ ದೇವಾದಿ । ಭುವನಂಗಳನು ಹಡೆದ
ಶಿವನ ಆಣತಿಯಿಂದ ಅಳುವೆ ನಗುವೆ
ಭವದ ಭವಿಗಳು ನಾವು । ಶಿವನ ಶಕ್ತಿಯು ನೀನು
ಅವನೆಡೆಗೆ ಬಲೆಬೀಸಿ ನಮ್ಮನೆಳೆವೆ ೩

೩–೧೧–೨೪

## ೫೭. ಹೂಂ

ಮೂರು ಮಂದಿ ಮೂಲ ಗುರುಗಳು ಈ ಚೆನ್ನಮಣಿಗೆ
ಮೂರು ಮಂದಿ ಮೂಲ ಗುರುಗಳು ॥ಪಲ್ಲ॥

ಜಗದೊಳುಂಡು । ಜಗದೊಳುಟ್ಟು
ಜಗದೊಳಿದ್ದು । ಜಗವರಿಯದೆ
ಮಿಗಿಲು ನಿದ್ದೆಗೆಯ್ಯುತಿರಲು
ತಗಣಿನಾಥನೆಚ್ಚರಿಸಿದ
ಮೂರು ಮಂದಿ ಮೂಲ ಗುರುಗಳು । ಈ ಚೆನ್ನಮಣಿಗೆ ೧

ಸುಳ್ಳು ಸತ್ಯವೆಂಬುದನ್ನು
ಬಳ್ಳುಮಾಡಿ ತೋರದಂತೆ
ಒಳ್ಳೆ ಮಬ್ಬುಗತ್ತಲಲ್ಲಿ
ಬಳ್ಳಿಯಾಗಿ ಬೆಳೆಯುತಿರಲು
ಕೊಳ್ಳದಲ್ಲಿ ಹರಣ ಹಾಕಿ
ಸೊಳ್ಳೆದಾಸನೆಬ್ಬಿಸಿದನು
ಮೂರು ಮಂದಿ ಮೂಲ ಗುರುಗಳು । ಈ ಚೆನ್ನಮಣಿಗೆ ೨

ಭೋಗದಾಗರಕ್ಕೆ ಸಿಕ್ಕು
ಸಾಗುವದಕ್ಕೆ ಶಕ್ತಿಗುಂದಿ
ಹೋಗ ಹೊರಟ ದಾರಿಯಲ್ಲಿ
ತಾಗಿ ಬಾಗಿ ತಂಗುತಿರಲು
ರೋಗರಾಯ ತಾನೆ ಬಂದು
ಯೋಗಪಥವ ತೋರಿಸಿದನು
ಮೂರು ಮಂದಿ ಮೂಲ ಗುರುಗಳು । ಈ ಚೆನ್ನಮಣಿಗೆ ೩

ದೇವರಾಯನಾಳುತಿರುವ
ದೇವರಾಜ್ಯವೆಮ್ಮ ಭೂಮಿ
ದೇವದೂತರಿವರು ಭವಕೆ
ಭಾವಮಂತ್ರ ಬೋಧಿಸುವರು
ಸಾವು ನೋವು ಸೂರೆಮಾಡಿ
ದೇವನಡಿಗೆ ದಾರಿಯೆಳೆವ
ಮೂರು ಮಂದಿ ಮೂಲ ಗುರುಗಳು । ಈ ಚೆನ್ನಮಣಿಗೆ ೪

## ೫೮. ಶ್ರೀ ಶ್ರೀ ವಿವೇಕಾನಂದರಿಗೆ

ರಾಗ–ಬಾಗೇಸರಿ. ತಾಲ–ಝುಂಪೆ,

ಮೂರು ನಾಮದ ಮುನಿಯೆ । ಮೂರು ಲೋಕದ ಮಣಿಯೆ ॥ಪ॥
ಹ್ರೀಂಕಾರವನು ಮೆಟ್ಟಿ । ಓಂಕಾರವನೆ ನುಡಿದು
ಭಾರತಿಯ ಬೆಳ್ಜಿಸವ ಮುಗಿಲಲ್ಲಿ ಮಿನುಗಿಸಿದ ॥ ಅ.ಪ ॥

'ವಿಶ್ವೇಶ್ವರ'ನೆ ನೀನು । ವಿಶ್ವವನು ವಿಸ್ತರಿಸಿ
ಸ್ವಸ್ತಿ । ಭಾರತಿಗೆನುತ । ವಿಶ್ವವನು ವ್ಯಾಪಿಸಿದೆ ೧

ನರಕುಲವನುದ್ಧರಿಸಿ । ನರಹರಿಯ ಪದತಳಕೆ
ಬೆರಿಸಿ ಮೆರೆಸಿದ ಶರಣ । ವರ 'ನರೇಂದ್ರ'ನೇ ಧನ್ಯ ೨

'ಈ' ವಿಷಯಗಳ ತೊರೆದು । 'ಆ'ವೊಂದರಲಿ ಬೆರೆದು
ಶ್ರೀ 'ವಿವೇಕಾನಂದ' । ಭೂವಂದ್ಯನಾಗಿರ್ದ ೩

ಶುದ್ಧ ಹೇತುವಿನಿಂದೆ । ಬದ್ಧಕಂಕಣನಾಗು
ನಿದ್ದೆಯಿಂದೇಳೆಂದು । ಬುದ್ಧಿಗಲಿಸಿದ ಗುರುವೆ ೪

ಮೂಡು ! ನನ್ನೊಳು ಮೂಡು ! ಬಾಡಿಬಳಲುವೆ ನೋಡು!!
ಕಾಡು ಹಕ್ಕಿಯ ಹಾಡಿ । ಗೋಡು ಬಾ ! ಬಾ ! ಓಡು ೫

೧೦–೧೨–೨೩

## ೫೯. ಶ್ರೀ ವಿವೇಕಾನಂದ

ಶ್ರೀ ವಿವೇಕಾನಂದ ! ಶರಣು ಶರಣು !!
ಶ್ರೀ ವಿವೇಕಾನಂದ ! ಶರಣು ಶರಣು ೧

ಶ್ರೀ ವಿವೇಕಾನಂದ ಮೂಡು ಒಡಮೂಡು
ಶ್ರೀವಿವೇಕಾನಂದವನು ನೀಡು ! ನೀಡು ೨

ಮಿಂಚಿನಂದದಿ ಮೂಡಿ ಮಾಯವಾಗುವರೇ ?
ಹಂಚಿಕೆಯ ಕಿರುಗೈಗೆ ನಿಲುಕಿ ಹಾರುವರೇ ? ೩

ಆಶೆತೋರಿಸಿ ಹೀಗೆ ದೂರ ಸರಿಯುವರೇ
ಆ ಸಣ್ಣ ಗಳಿಗೆಯನು ಮುಚ್ಚಿ ಮರೆಸುವರೇ ೪

ನೋಡಿ ನೀಡುವನೆಂದು 'ಬಸವ' ಪೇಳಿದನು
ಕೂಡಿ ಆಡುವನೆಂದು 'ಪಾರ್ಥ' ಹೇಳಿದನು ೫

ಸೀತೆ ಹೇಳಿದಳಲ್ಲೊ ನಂಬುನಂಬೆಂದು
ಏತರಲಿ ಸಿಕ್ಕುವದೊ ನಿನ್ನ ಇಂಬೊಂದು ೬

ನೆಲೆಹತ್ತದಂತಾಗಿ ಕಾಲು ಹಾರುವವು
ನೆಲೆಯನಲೆದಾಡಿಸುವದೆಂಥದೀ ಸೆಳವು ೭

ತುಟಿಯ ಪಿಟುಕಿಸಿ ಏನು ಹೇಳಿ ನೀ ಹೋದೆ
ಚಟಕಿಯನು ಹೊಡೆದು ನೀನೇನು ಸೂಚಿಸಿದೆ ೮

ಶ್ರೀವಿವೇಕಾನಂದ ಮೂಡು–ಒಡಮೂಡು
ಶ್ರೀವಿವೇಕಾನಂದವನು ನೀಡು ! ನೀಡು ೯

ಹುಡುಹುಡುಕಿ ದಣಿಯುವದು ನಿನ್ನುಡುಗ ನೋಡು
ಅಡಗುವದು ಎಷ್ಟೊತ್ತು ? ಮೂಡು ಒಡಮೂಡು ೧೦

ಬಳಲಿ ಆ ಬಳಿಕ ಎಳೆ ಮಗು ತೊಳಲಬಹುದೇ ?
ಅಳಿಸಿ ಮಗುವನು ತಾಯಿ ಸುಮ್ಮನಿರಬಹುದೇ ? ೧೧

ಬಲು ಬಿಸುಪು ಹೆಚ್ಚಾಗಿ ಹೌಹಾರದಿರಲು
ನೆಲಮುಗಿಲನೊಂದಿಸುವ ಮಳೆ ಬಹುದೆ ಮಿಗಿಲು ೧೨

ಬಳಲಿಕೆಗೆ ಬೆಚ್ಚಿ ನಾನಳುವವನಲ್ಲ
ಬಳಲುತಿರಲೆದೆಗರಗಿ ನೀ ಬರುವೆಯಲ್ಲ ೧೩

ಕರೆದರೂ ಬಾರದಲೆ ಮರೆಗಿರುವ ನೀನು
ಕರೆಯದೇ ಹರಿಗೊಂಡು ಆಗ ಬಹೆ ಏನು? ೧೪

'ಆಗ' 'ಈಗ'ಗಳ ನಡುವಿರುವ ಆಗಲೊಂದೇ
ಆಗಿಹುದು ಅಗಲಿಕೆಯ ಆಗಲು ಬೇರೆ ಮುಂದೆ ೧೫

ಈ ಸಂದನಡ್ಡಲಗು ಹತ್ತೆಯಾದಂತೆ
ಈಸೊಂದು ಚಿಂತೆಗಳದುಂಟೆ ೧೬

ಶ್ರೀವಿವೇಕಾನಂದ ಮೂಡು ಒಡಮೂಡು
ಶ್ರೀವಿವೇಕಾನಂದವನು ನೀಡು ! ನೀಡು ೧೭

* * *

ಆಶೆ ಕಡಿದರು ಕೂಡ ಆಶೆಯನು ಬಿಡದೆ
ಏಸೊ ದಿನವಾದರೂ 'ಸೀತೆ' ಬಗೆಗೆಡದೆ ೧೮

ಆನಂದರೂಪನ 'ವಿವೇಕ'ನಿಧಿಯನ್ನು
ತಾನಂದು ಪಡೆದಳಲ್ಲವೆ 'ರಾಮ'ನನ್ನು ೧೯

ತನ್ನ ತನುಮನವ ನೀಡಿ 'ರಾಧಿಕಾ' ಕನ್ಯೆ
ಮುನ್ನ ತಾ ಪಡೆದಳಲ್ಲವೆ 'ಕೃಷ್ಣ'ನನ್ನೆ ೨೦

ರಾಮನೊಲಿದು ಅಚಲವಾದ ನಂಬುಗೆಗೆ
ಶ್ಯಾಮಸುಂದರನೊಲಿದನ್ಯೆ ಸಮರ್ಪಣೆಗೆ ೨೧

ರಾಮಕೃಷ್ಣರು ನಿನ್ನ ಹುಡುಕುತ್ತ ಬಂದು
ಈ ಮೃತ್ಯುಲೋಕದಲಿ ಕೈಹಿಡಿದರಂದು ೨೨

ಆವ ಮೋಹನ ಮಂತ್ರವಿತ್ತೊ ನಿನ್ನಲ್ಲಿ
ಆವೊಂದೆ  ಮಂತ್ರವನ್ನೂದೊ ನನ್ನಲ್ಲಿ ೨೩

ಆಗ ನನಗೊಂದಿಷ್ಟು ಧೈರ್ಯವಾಗುವದು
ಬೇಗ ನಿನ್ನಿಂದೆನಗೆ ಸ್ಥೈರ್ಯವಾಗುವದು ೨೪

ಶ್ರೀ ವಿವೇಕಾನಂದ ಮೂಡು ಒಡಮೂಡು
ಶ್ರೀವಿವೇಕಾನಂದವನು ನೀಡು ! ನೀಡು ೨೫

ಶ್ರೀ ವಿವೇಕಾನಂದ ಶರಣು ! ಶರಣು !!
ಶ್ರೀ ವಿವೇಕಾನಂದ ಶರಣು ! ಶರಣು !! ೨೬

೧೦-೭-೨೬ (ಗುರುವಾರ)

## ೬೦. ಉಷಾ

೧

ಓವೋ ! ನೋಡಿರಿ ಮುಗಿಲ್ಮಗಳು ಮೂಡಣದಲ್ಲಿ
ಮತ್ತೆ ಮೂಡಿರುವಳಿಂದು
ಈ ವೀರರಮಣಿ ಕೆಂಬೆಳಗಿನರಿವೆಗಳನ್ನೆ
ಉಟ್ಟಿರುವಳೊಪ್ಪುವಂದು
ಮುಗಿಲಿನಂಗಣದ ಮೂಡಲದರ್ಧ ಭಾಗದೊಳು
ರುಚಿಕರ ಕಿರಣಂಗಳನ್ನು
ಮಿಗೆ ಚೆಲ್ಲುತಿಹ ತನ್ನ ಪಳಯಿಗೆಯ ಫಡಫಡಿಸು–
ತಿಹಳುಷಾದೇವಿ ತಾನು
ತನ್ನ ಕತ್ತಿಯ ಹಿರಿದು ಚಕಚಕನೆ ಝಳಪಿಸುವ
ಬಂಟನಂತೀ ತಾಯಿಯು
ತನ್ನ ಲಕಲಕಿಸುತಿಹ ಹೊಳಹನುರೆ ಹರಡಿಸುತ–
ಲೀ ಕಡೆಗೆ ಬರುತಲಿಹಳು
ರಕ್ತವರ್ಣದ ಕಿರಣಗಳದೆಂತೊ ಸಹಜಗತಿ
ಯಿಂದ ಜಿಗಿಯುತ ಬರುತಿವೆ
ಯುಕ್ತಮಾದೀ ವೇಳೆಯೊಳ್ ಮೊದಲಿನಂತೆಯೆ
ಜಗಕೆ ಬೆಳಕನು ಬೀರಲು

೨

ಹಾತೊರೆದು ಬರುತಿಹಳು ಝುಗಝುಗಿಸುತಿಹ ಕಾಂತಿ
ಯನು ತಳೆದ ತೇರನೇರಿ
ಹಾ ! ತಾನು ತನ್ನ ಹೇತುವನೆಂತು ಹೊರಪಡಿಸು
ತಿಹಳಿದೋ ನೋಡು ನೋಡು
ಕವಿತೆಯಂತತಿ ಚಾರುತೆಯ ಧರಿಸಿದುಷೆಯ ತುಟಿ
ಗಲ್ಲಗಳ ಮೇಲೆ ಸುಳಿವ
ಸವಿನಗೆಯ ತೆರೆಗಳಿವಂತರಂಗದ ಕೃಪಾ
ಶರಧಿಯನು ಸೂಚಿಸುವವು

ಇದೋ ನೋಡಿರೀ ಪ್ರೇಮಮೂರ್ತಿಯಾ ಭವ್ಯ ರಥ
ವೆಂತು ಲಕಲಕಿಸುತಿಹುದು
ಅದರ ಸುತ್ತಲು ನಾಶರಹಿತ ತೇಜಃಪುಂಜ
ತಾರಾಂಗಣವು ಹೊಳೆವುದು
ಪಸದನಗಳೊಳ್ವೆಳಗಿಂ ನೆಲದ ಕಪ್ಪು ಬಣ್ಣಮನೆಲ್ಲ
ಬಿಳಿದಾಗಿಸಿ
ನಸುನಗುತ ಕಿಸುಗುದುರೆಗಳನುಳ್ಳ ಹೊಸದೇರೊ–
ಳೆಸೆಯುತುಷೆ ಬರುತಲಿಹಳು

೩

ಪ್ರಿಯಕರನ ಕಾಂತಿಯಿಂದೊಡಗೂಡಿದುಷೆಯು ತಂ–
ಗಿಯನು ರಾತ್ರಿಯನು ಸರಿಸಿ
ರಯದಿಂ ದ್ಯುಲೋಕದೆಲ್ಲೆಯವರೆಗೆ ತನ್ನ ಬೆಳಕನು
ಶೋಭಿಸುವಳು
ಬಳೆಬಣ್ಣದುಷೆಯ ಬರವನು ನೋಡಿ ಶಾಮಲಾಂಗಿಯು
ನಿಶಾರಮಣೀ ಮಣಿಯು
ಸಲೆ ತನ್ನ ವಾಸಸ್ಥಳಂಗಳನವಳ ತುಸುಕ
ತೆರವುಮಾಡಿಟ್ಟಿರುವಳು
ಅಕ್ಕರೆಯ ಅಕ್ಕ–ತಂಗಿಯರಿವರು ತಮ್ಮೊಳೊ–
ರ್ವರನೊರ್ವರನುಸರಿಸುವ
ಅಕ್ಕ–ತಂಗಿಯರು ಲೋಕದ ಬಣ್ಣ ಪಲ್ಲಟಿಸಿ
ನಡೆವರೀ ಬಾಂಬಟ್ಟೆಯಿಂ
ಉಭಯ ಭಗಿನಿಯರಿವರನಂತ ಮಾರ್ಗದೆ ನಡೆವರೀಶ
ನಾಣತಿಯನಾಂತು
ನಭದಲೊಂದೆ ವಿಚಾರದಿಂ ನಡೆವರಾದೊಡಂ
ಪರಿಜಮಿತ್ತೆರವಿರ್ಪುದು
ನಡಿಗೆಕಾರ್ತಿಯರಿವರು ರಜನೀವಧೂಟಿ ಮೇಣುಷೆಯು
ತಾವೆಲ್ಲೆಲ್ಲಿಯುಂ
ನಾಡೆ ನಿಲ್ಲರು; ಮತ್ತೆ ವಿಶ್ರಾಂತಿಯನ್ನೆಂದಿಗುಂ
ಬೇಡಿ ಬಯಸದಿಹರು

೪

ಮೊದಲಿನಿಂದೀ ಉಷಾದೇವಿಯೊಂದೇ ಸವನೆ
ಥಳಥಳಸಿ ಹೊಳೆಯುತಿಹಳು
ಸದಯಳಂತೆಯೇ ಬೆಳಗುತಿಹಳಿಂದುಮಿನ್ನು ಮುಂದುಂ
ಪ್ರಕಾಶಿಸುವಳಿವಳು
ಹುಟ್ಟುಸಾವುಗಳ ಪಿಡುಗಿನ ಬಲೆಯ ಜಿಗಿದುಷಾದೇವಿ
ಸುಮ್ಮಾನದಿಂದ
ಅಟ್ಟಹಾಸದಿ ತನ್ನ ಹಾದಿಯನೆ ಹಿಡಿದು ಹೊರಟಿರುವ
ಒಯ್ಯಾರದಿಂದ
ರವಿಯು ಕೈಮಾಡಿ ತೋರಿಸಿದ ಹಾದಿಯ ಹಿಡಿದು
ತಾನೆಂತೊ ಚತುರಳಂತೆ
ಪವಮಾನ ಮಾರ್ಗದೊಳ್ ನುಡೆಯುವಳು ! ದಿಕ್ಕ ತಪ್ಪು
ವದಿಲ್ಲವೆಂದೆಂದಿಗೆ
ಸೂರ್ಯನಾರಾಯಣನಿಗಾಗಿ ಹಾದಿಯನುಡುಗಿದಳು
ಹಾದಿಸಾಗಲೆಂದು
ವೀರ್ಯವನು ಹೊಂದಿ ಜಗವೆಂತು ನಿಂತಿದೆ ನೋಡು
ಸ್ವಾಗತಕ್ಕೆಂದು ಬಂದು

೫

ಕತ್ತಲೆಯೊಳಿಂತು ನಮ್ಮೊಡತಿ ರಥವೇರಿ ಭರದಿ
ಬಂದಿರುವುದಕ್ಕೆ
ತಗ್ಗಿಕುಗ್ಗಿದ ಜಗದ ಸೊಂಬುತನವನು ಬಗ್ಗು-
ಬಡಿಯುವುದೆ ನೆರಮವಲ್ಲವೇ?
ಜಗವೆಲ್ಲ ನಿದ್ದೆಯೊಳ್ ಬಿದ್ದಿರಲ್ಕೆಲ್ಲರಿಂ ಮೊದಲೆದ್ದು
ಚಟುವಟಿಕೆಯಿಂ
ಸೊಗಸಿನಿಂ ಪ್ರಥಮಾಹುತಿಯ ವೇಳೆಗೆಲ್ಲರಿಂ ಮೊದಲೆ
ಅಣಿಯಾಗುತಿಹಳು
ಚಿರಯವ್ವನಾ ಸುಂದರಿಯು ಬಿಡದೆ ಮೇಲಿಂಮೇಲೆ
ನವಜನ್ಮವನು ತಾಳುತೆ
ನಿರುಕಿಸುವಳೀ ಜಗವನಾಕಾಶದತ್ಯುಚ್ಚ ಭಾಗದೊಳ್

ಮಿಗೆಮಂಡಿಸಿ
ದಿನದಿನದೊಳೊಂದೊಂದು ಹೊಸವೇಷವನು ಧರಿಸಿ
ಸೊಗಸುಗಾರ್ತಿಯು ಸೊಬಗಿನಿಂ
ಮನೆಮನೆಗೆ ತಪ್ಪದಲೆ ದರುಷನಕ್ಕೆಂದು ದಯ ಮಾಡಿಸುವಳಾನಂದದಿಂ

೬

ಇದುವರೆಗೆ ಮೂಡಿ ಬಯಲಾದುಷೆಯರೊಳ್ ಕಡೆಯವಳ್
ಮುಂದೆ ಬರುವವರೊಳು
ಮೊದಲಿಗಳೆನಿಪ್ಪವಳು ಬರುತಿಹಳು ಜಗದೆ ಸುರಿಸುತ
ಸೊಗದ ಸುರಿಮಳೆಯನು
ಕವಿಯು ಹೃದಯವ ತಿಳಿಸುವಂತೆ ಲೋಕದೊಳಿರುವ
ಸೌಂದರ್ಯವನು ತಿಳಿಸುವ
ಇವಳ ಬಿಳಿಯೆದೆಯೆಂತು ಹೊಳೆಯುತಿಹುದಿಲ್ಲಿ
ಬಲು ಸೊಬಗಿನಿಂ ನೋಡು ನೋಡು
ಮಧುರ ಸತ್ಯದ ಲಾಭವನ್ನೀಯುವೀಯುಷಾದೇವಿ
ಮೊಗದೋರುತಿಹಳು
ಇದೊ ನೋಡು ನೋಡಿವಳು ನಮ್ಮ ಮನೆಬಾಗಿಲ್ಗಳ–
ನ್ನೆಂತು ತೆರೆದಿಟ್ಟಳು
ಜಗವನವರವರುದ್ಯಮದ ಕಡೆಗೆ ಸೆಳೆಸೆಳೆದು
ನಮಗಾಗಿ ವೈಭವವನು
ನಗುನಗುತ ಹೊರಗಿರಿಸಿ ಜೀವಕೋಟಿಯನೆಂತೊ
ಎಚ್ಚರಿಸುತೆಬ್ಬಿಸುವಳು

೭

ಜಗದೊಳಿರುವೆಲ್ಲ ಸುಂದರ ವಸ್ತುಗಳ ತಿರುಳನೇ
ತನ್ನ ಬೆಳಕಿನಿಂದ
ಮಿಗೆ ಸವಿದು ರುಚಿಯ ನೋಡುವಳಿವಳಿಗಲ್ಲ–
ದಿನ್ನಾರ್ಗೆ ಮೀಸಲು ದೊರೆವುದು
ಕುಟ್ಟಿಮಾಡಿರುವಂತೆ ತುಂಬಿರುವ ಮೈಯುಳ್ಳ
ಪೊಸವೆಣ್ಣಿನಂತೆಸೆಯುವ
ದಟ್ಟಾದ ಕೆಂಬೆಳಗಿನಿಂದೊಪ್ಪುವೆಳಮೈಯ್ಯ ಹೊಸ ಹರೆಯ
ಹೆಣ್ಣೆ ! ಉಷೆಯೇ

ನೀನು ನಿನ್ನಯ ಹೊಳೆವ ಮನದನ್ನನೆಡೆಗೈದು–
ವುದನೆಲ್ಲ ನಾನು ಒಲ್ಲೆ
ನಿನ್ನಂತೆ ನಿನ್ನಿನಿಯನುಂ ಮಹೋತ್ಸುಕನಾಗಿ ಹಣಿಕೆ
ಹಾಕುವುದು ಸುಳ್ಳೇ?
ಸಂತಸದಿ ನೀಂ ಮುಗುಳುನಗೆ ನಗುತಲೊನಪಿನಿಂ
ಹರೆಯದೇರುವಿಕೆಯಲ್ಲಿ
ಅಂತೆಯೇ ಕುಚಪ್ರದೇಶದ ವಸ್ತ್ರವನಿಂತು
ತುಸು ಸರಿಸಿ ತುಸು ಮುಚ್ಚುವೆ

೮

ಏಳಿರೇಳಿರಿ ನಮಗೆ ಚೈತನ್ಯವನು ಕೊಡುವ
ಪ್ರಾಣಮೂರುತಿ ಬಂದಳು
ಏಳಿರೇಳಿರಿ ಕತ್ತಲೋಡಿ ಹೋಯಿತು ಬೆಳಗುತಿಹ
ಬೆಳಕು ಬರುತಲಿಹುದು
ಜನರೆದ್ದು ದುಡಿಯಹತ್ತಿದರೀಗ ಹಕ್ಕಿಪಕ್ಕಿಗಳುಲಿಯ
ಹತ್ತಿರುವವು
ಧಣಧಣಿಸಹತ್ತಿದವು ಮಂಗಳದ ವಾದ್ಯಗಳು
ನೋಡುನೋಡುವ ಕಡೆಯೊಳು
ಹೊತ್ತು ಹುಟ್ಟುವ ಮೊದಲು ಬರುವ ಮುಂಜಾವುಗಳೆ
ಬರುತಿರಲಿ ಬಹಳವಾಗಿ
ಹೊತ್ತಿನೊಡನಿರ್ಪುಷೆಯು ಎತ್ತಾದಿಗಳ ಕೊಂಡು
ನಮಗಾಗಿ ಬರುತಲಿರಲಿ
ಜಗದ ಕಡೆಗೊಂದು ಸಲ ದಿಟ್ಟಿಯನು ಚೆಲ್ಲಿ ಮತ್ತಾ
ದಿಟ್ಟಿಯನು ತಿರುಗಿಸಿ
ಜಗದೊಳ್ ಪ್ರಕಾಶವಂ ಹರಡಿ ಸುಳಿವವಳನಿದೊ
ಕವಿಕುಲವು ನುತಿಗೆಯ್ವುದು

ಕಂದ ॥ ಸಲೆ ಋಗ್ವೇದದ ಋಚೆಗಳ
ಸುಲಲಿತ ಗದ್ಯಾನುವಾದದಿಂ ಮನವೊಲೆದು
ಕೆಲವಂಶಗಳನಾಯ್ದು ಸ–
ರಲ ಛಂದದಿನಿಂತು ಚೆನ್ನಮಲ್ಲಪನೊರೆದಂ

―――